# ಎರಡು ಸೆಳೆತ

ವಂಶಲೋಚನ ಮುಖ್ಯೋಪಾಧ್ಯಾಯರ ಮನೆತನವು ತಾರಾಪುರದಲ್ಲಿ ಎಲ್ಲಕ್ಕಿಂತಲೂ ವೈಭವಸಂಪನ್ನವಾಗಿದ್ದಿತೆಂಬುದಕ್ಕೆ ಪ್ರಕಾಂಡವಾದ ಮೂರು ಅಂತಸ್ತಿನ ಮನೆ, ಅದರ ಹಿಂಭಾಗದಲ್ಲಿದ್ದ ದೊಡ್ಡ ಕಾಳೀಮಂದಿರ ಈಗಲೂ ಸಾಕ್ಷ್ಯ ನುಡಿಯುತ್ತಿವೆ. ಈಗ ಅವೆಲ್ಲಾ ಬೀಳಲಾಗಿವೆ; ಮನೆಯ ಗೋಡೆಗಳು ಮಣ್ಣು ಸುಣ್ಣ ಕಾಣದೆ ಕಳಚುತ್ತಿವೆ; ಕಿಟಿಕಿಗಳ ಕದಗಳು ಮುರಿದು ಕಿತ್ತುಹೋಗಿ ಜೋತಾಡುತ್ತಿವೆ, ಛಾವುಗಳ ಚಪ್ಪರಗಳು ಮುರಿದುಹೋಗಿವೆ; ಮೇಲಿನ ಕೋಣೆಗಳಲ್ಲಿ ಹಕ್ಕಿ ಪಕ್ಕಿಗಳು ಗೂಡು ಕಟ್ಟಿವೆ; ಚಪ್ಪರವನ್ನು ಆಲ-ಅರಳಿ ಮರಗಳು ಸಂದಿನಲ್ಲಿ ಕೈಹಾಕಿ ಸಡಿಲಿಸಿವೆ. ಈ ಅವಸ್ಥೆಯನ್ನು ಕಂಡವರು ಮುಖಯ್ಯರ ಮನೆತನದಲ್ಲಿ ಈಗ ಹುರುಳುಳಿದಿಲ್ಲವೆಂದು ಎಂದುಕೊಳ್ಳುವರು. ಕೋಣೆಕೋಣೆಯಲ್ಲಿಯೂ ಆಪ್ತೇಷ್ಟರು, ಕರಣಿಕರು, ಆಳು-ಹೋಳುಗಳು, ಬರುವವರು ಹೋಗುವವರು ಮೊದಲಾದವರ ಕೋಲಾಹಲ ನಡೆಯುತ್ತಿದ್ದ ಆ ಮೂರಂತಸ್ತಿನ ಮನೆಯೊಳಗೆ ಈಗ ಸಿಳ್ಳಿಮಿಳ್ಳಿ ಮೂರೇ ಮೂರು ಪ್ರಾಣಿಗಳು ವಾಸವಾಗಿವೆ—ವಂಶಲೋಚನರು, ಅವರ ಗಂಡ ಸತ್ತ ಮಗಳು ಹೈಮವತಿ, ಮತ್ತವರ ದಾಸಿ.

ವಂಶಲೋಚನರ ಅಜ್ಜಮುತ್ತರ ಕಾಲದಲ್ಲಿ ಕಾಳಿಗೆ ನಿತ್ಯ ಬಲಿ ನಡೆಯುತ್ತಿದ್ದಿತು. ಇವರ ಕಾಲದಲ್ಲಿ ಮಂಗಲವಾರಕ್ಕೊಮ್ಮೆ ಎಂದು ಮೊದಲಾಗಿ, ಈಗ ಅಮಾವಾಸ್ಯೆಗೊಮ್ಮೆ ರೂಢವಾಗಿದೆ. ಆದರೆ ಕಾಳೀಪೂಜೆಯ ದಿನ ಪಂಚಬಲಿ ಕೊಡುವ ಪದ್ಧತಿಯನ್ನು ವಂಶಲೋಚನರು ಇನ್ನೂ ಬಿಟ್ಟಿಲ್ಲ-ಒಂದೊಂದು ಕೋಣ, ಕುರಿ, ಆಡು, ಕಬ್ಬು, ಕುಂಬಳಕಾಯಿ ಈ ಐದನ್ನು ಬಲಿ ಕೊಟ್ಟು ಪೂಜೆ ಸಾಂಗವಾಗುತ್ತಿದೆ. ಅವರ ಹೆಂಡತಿ, ಗಂಡುಮಕ್ಕಳು, ಹೆಣ್ಣು ಮಕ್ಕಳು ಎಷ್ಟೋ ಜನ ಒಬ್ಬರ ಹಿಂದೊಬ್ಬರೆಂಬಂತೆ ಅವರ ಮನೆ

ಯಲ್ಲಿ ಸತ್ತಿದ್ದಾರೆ. ಆ ಎಲ್ಲ ಸಮಯಗಳಲ್ಲಿ ಅವರು, 'ನಾನು ಸ್ವಾರ್ಥಪರ ಲೋಭಿಯಂತೆ ನನ್ನ ವಿಷಯದಲ್ಲಿಯೇ ಮಗ್ನನಾಗಿಬಿಟ್ಟಿರುತ್ತೇನೆ, ಅದರಲ್ಲಿ ಚಿನ್ಮಯಿ ಮಾತೆಯನ್ನೇ ಮರೆತುಬಿಡುತ್ತಿದ್ದೇನೆ, ಅದಕ್ಕೆ ಮಾತೆ ನನ್ನ ಒಂದೊಂದೇ ಬಂಧನವನ್ನು ಕಡಿಯುತ್ತಿದ್ದಾಳೆ, ನನ್ನ ವೆಚ್ಚವನ್ನು ಉಳಿಸುತ್ತಿದ್ದಾಳೆ, ಜನರ ಭೋಗಕ್ಕೆ ಸಲ್ಲುತ್ತಿದ್ದ ಹಣವನ್ನು ಇನ್ನು ಮಾತೆಯ ಭೋಗಕ್ಕೆ ವಿನಿಯೋಗಿಸಲಿಕ್ಕಾಗುತ್ತದು!' ಎಂದು ಪ್ರಶಾಂತವಾಗಿ ತಮ್ಮನ್ನು ಸಂತೈಸಿಕೊಳ್ಳುತ್ತಿದ್ದರು. ಅದೇಕೆ, ಪ್ರಪಂಚದ ಆಗಿನ ವೆಚ್ಚವನ್ನೂ ಈಗಿನ ವೆಚ್ಚವನ್ನೂ ಲೆಕ್ಕ ಮಾಡಿ ಮಿಗುವ ಹಣವನ್ನು ಕಾಲಿಗಾಗಿಯೇ ವೆಚ್ಚಿಸುತ್ತಾರೆ. ಆ ವೆಚ್ಚದಲ್ಲಿಯೇ ನಾಲ್ಕು ಜನ ಬಡಬಗ್ಗರು ಪ್ರಸಾದ ಹೊಂದಿ ವಂಶಲೋಚನ ಮಹಾಶಯರನ್ನು ಧನ್ಯರನ್ನಾಗಿ ಮಾಡುತ್ತಿರುವರು. ಈಗ ವಿಧವೆ ಮಗಳೊಂದಿಗೆ ವೃದ್ಧ ವಿಧುರ ವಂಶಲೋಚನರೂ ಒಪ್ಪೊತ್ತು ಸ್ವಲ್ಪ ಹವಿಷ್ಯವನ್ನು ಭುಂಜಿಸಿ, ಉಳಿದ ತಮ್ಮ ಉತ್ಪನ್ನವನ್ನು ಆ ಚಿನ್ಮಯಿಯ ಸೇವೆಗೇ ನೀಡುವರು. ಅವರ ಇದೀ ಹೃದಯವನ್ನು ವ್ಯಾಪಿಸಿ ನಿಂತ ಮಮತಾಪಾತ್ರರು ಇಬ್ಬರೇ—ಚಿನ್ಮಯಿ ಕಾಳೀಮಾತೆ ಮತ್ತು ಮಗಳು ಹೈಮವತಿ.

ಪ್ರತಿವರುಷ ಕಾಳೀಪೂಜೆಯ ಮೊದಲು ದಾಯಿಹಾಟದ ಪ್ರಸಿದ್ಧ ಕಲಾವಿದ ಗೋವರ್ಧನನು ಬಂದು ಪ್ರತಿಮೆಗೆ ಬಣ್ಣ ಕೊಟ್ಟು ಹೋಗುತ್ತಿದ್ದ. ಅವನು ಕುಂಚಕೌಶಲದಿಂದ ಮೃಣ್ಮಯಿಯ ಮುಖದಲ್ಲಿ ಚಿನ್ಮಯಿಯ ಕಳೆಯನ್ನು ತುಂಬುತ್ತಿರುವಾಗ, ಮಗಳೊಂದಿಗೆ ಹತ್ತಿರ ನಿಂತುಕೊಂಡು ಆ ಚಿತ್ರಣವನ್ನು ಹಿಗ್ಗಿನಿಂದ ನೋಡುತ್ತಿರುವುದು ವಂಶಲೋಚನರ ಅತಿ ಪ್ರಾಮುಖ್ಯವಾದ ಕಾರ್ಯವಾಗಿದ್ದಿತು. ತನ್ನ ತಂದೆ ತೀರಿಕೊಂಡಾಗ ಗೋವರ್ಧನನ ವಯಸ್ಸು ಮೂವತ್ತು. ಆಗಿನಿಂದಲೂ ಅವನು ವರುಷ ವರುಷವೂ ಮುಖ್ಯೋಪಾಧ್ಯಾಯರ ಮನೆಯ ದೇವೀಮೂರ್ತಿಗೆ ಬಣ್ಣ ಕೊಡುವುದಕ್ಕಾಗಿ ಬಂದು ತಿಂಗಳುಗಟ್ಟಲೆ ಇರುತ್ತಿದ್ದ. ಅವನು ಮೊದಲ ಸಲ ಬಂದಾಗ —ಅದು ಈಗ ಹತ್ತು ವರ್ಷದ ಹಿಂದಿನ ಮಾತು—ಹೈಮವತಿ ಹನ್ನೊಂದು ವರುಷದಾಕೆ. ಹುಡುಗಿಯಿದ್ದಾಗಿನಿಂದಲೂ ಗುರುತು ಬಳಕೆ ಆಗಿದ್ದುದರಿಂದ ಗೋವರ್ಧನನೊಡನೆ ಆಕೆಯ ಸಂಬಂಧ ಸಲಿಗೆಯದಾಗಿತ್ತು. ಅವನ ತಂದೆ ಹೈಮವತಿಯನ್ನು ಪ್ರೀತಿಯಿಂದ ಮಗೂ ಎಂದು ಕರೆಯುತ್ತಿದ್ದ; ಮಗನೂ

ಅದನ್ನು ಅನುಸರಿಸಿ ತಂಗೀ ಎನ್ನುತ್ತಿದ್ದ. ಅಂತೂ, ವರುಷದಲ್ಲಿ ತಿಂಗಳೊ-ಪ್ಪತ್ತೇ ಇಲ್ಲಿ ಬಂದಿರುತ್ತಿದ್ದರೂ ಗೋವರ್ಧನನು ಈ ಮನೆತನದವನಂತೆಯೇ ಆಗಿದ್ದ.

ಈ ಹತ್ತುವರುಷಗಳ ಅವಧಿಯಲ್ಲಿ ಗೋವರ್ಧನನ 'ತಂಗಿ'ಯು ಮದುವೆಯಾಗಿ, ಗಂಡನೂ ಸತ್ತು ವೈಧವ್ಯವು ಪ್ರಾಪ್ತವಾಗಿತ್ತು. ಮದುವೆಯಾದ ವರುಷ ಗೋವರ್ಧನನು ತಂಗಿಯ ಗಂಡನ ವಿಷಯವನ್ನೆತ್ತಿ ಅನೇಕ ಸರಸ ಸಲ್ಲಾಪಗಳನ್ನಾಡಿದ್ದ. ಆಗವಳ ಸುಂದರವಾದ ಮುಖ ನಾಚಿಕೆಯ ಕೆಂಪೇರಿ ಸುಂದರತರವಾಗಿದ್ದಿತು. ಅದರ ಮರುವರುಷ ಬಂದು ನೋಡಿದ— ತಂಗಿಯ ಹಣೆಯ ಮೇಲೆ ಕುಂಕುಮದ ಬೊಟ್ಟಿಲ್ಲ, ಕೈ ಬೋಳಾಗಿವೆ, ಬಟ್ಟೆ ಬಿಳಿಯವು! 'ತಂಗೀ' ಎಂದು ಸಂಬೋಧಿಸಿ ಸರಸವಾಡಲು ಅವನಿಂದಾಗದೆ ಹೋಗಿತ್ತು. ಕಾಲಿಯ ಅಡಿದಾವರೆಗಳಿಗೆ ಕೆಂಪು ಬಣ್ಣವನ್ನು ಬಳಿಯುತ್ತ ಬಳಿಯುತ್ತ 'ತಾಯಿ, ಇವನ್ನೇನು ಮಾಡಿದೆ!' ಎಂದು ಶೋಕಿಸಿದ್ದ. ಹೈಮವತಿಯ ಬಗೆಗೆ ಆತನಿಗಿದ್ದ ಅಂತಃಕರಣ ವೇದನೆಯಿಂದ ಆವಿದ್ಧವಾಗಿ ಅಂತರಂಗದಲ್ಲಿ ಆಳವಾಗಿ ಸೇರಿಕೊಂಡಿತು. ಆಮೇಲೆ ಕೆಲವು ವರ್ಷಗಳಲ್ಲಿ ಅವಳ ಅಂಗರಾಜ್ಯದಲ್ಲಿ ಯೌವನದ ಜಯಪತಾಕೆ ಗೌರವದಿಂದ ಗರ್ವದಿಂದ ಫಡಫಡಿಸುತ್ತ ತನ್ನ ಅಧಿಕಾರವನ್ನು ನಡೆಯಿಸತೊಡಗಿತು. ಅದೇ ಕಾಲದಲ್ಲಿ ವರ್ಷವರ್ಷವೂ ಸೋದರರನ್ನು, ಸೋದರಿಯರನ್ನು, ಹಡೆದ ತಾಯಿಯನ್ನು ಕಳೆದುಕೊಂಡ ಶೋಕದ ಕಾಳ್ಗತ್ತಲೆಯಿಂದ ಅವಳಂಗದ ಹೇಮಕಾಂತಿ ಕಂದಿ ಕುಂದಿತು.

ಈ ವರುಷವೂ ಗೋವರ್ಧನನು ಮುಕರ್ಜಿಯವರ ಚಂಡೀ ಮಾತೆಯ ಸೇವೆಗೆ ಬಂದು, ಎಂದಿನಂತೆ ಅವರ ದೇವ್ಯಸಂಗ್ರಹ ಮನೆಯ ಬೀಳಲಾದ ದೊಡ್ಡ ಕೋಣೆಯೊಂದನ್ನು ಹಸನ ಮಾಡಿಕೊಂಡು ಇರತೊಡಗಿದ. ಈ ಅವಧಿಯಲ್ಲಿ ಹೈಮವತಿಯ ಚಿಕ್ಕ ತಮ್ಮನೂ ತಾಯಿಯನ್ನಗಲಿ ಇರಲಾರದೆ ಅವಳ ಹತ್ತಿರವೇ ಹೋಗಿದ್ದಿತು. ಅದರ ಪರಿಣಾಮವಾಗಿ ಇಪ್ಪತ್ತೊಂದು ವರುಷದ ಹೈಮವತಿ ಪ್ರೌಢೆಯಂತೆ ಗಂಭೀರೆಯಾಗಿಬಿಟ್ಟಿದ್ದಳು; ವಂಶಲೋಚನರು ಐವತ್ತನೆಯ ವಯಸ್ಸಿನಲ್ಲಿಯೇ ಮುದುಕರಾಗಿಬಿಟ್ಟಿದ್ದರು. ಈ ಸಾರೆಯ ಕ್ಲೇಶ ಅವರ ಮನಸಿನ ಮೇಲೆ ಪ್ರಬಲವಾದ ಆಘಾತ ಮಾಡಿದ್ದಿತು. ಗೋವರ್ಧನನೂ

ಈ ಬಾರಿ ಗೃಹಿಣಿಯನ್ನು ಕಳೆದುಕೊಂಡವ; ತಬ್ಬಲಿಯಾದ ಹೆಣ್ಣುಮಗು ವೊಂದನ್ನು ಸಂಗಡಲೇ ಕರೆದುಕೊಂಡು ತ್ರಿಲೋಕ ಜನನಿಯ ಚರಣಾರವಿಂದದಲ್ಲಿ ಶೋಕವನ್ನು ನಿವೇದಿಸಲು ಬಂದಿದ್ದ. ಅವನು ವಂಶಜ ಬ್ರಾಹ್ಮಣ. ಅವರ ಸಮಾಜದಲ್ಲಿ ಹೆಣ್ಣು ಅಷ್ಟೇನೂ ಅಗ್ಗವಲ್ಲ. ತನ್ನ ಮೂವತ್ತುಮೂರು ವರುಷ ಆಯುಷ್ಯ ಗತಿಸಿದ ಬಳಿಕ, ಹೆಣ್ಣಿನ ತಂದೆಗೆ ಒಂಬತ್ತು ನೂರು ರೂಪಾಯಿ ತೆರವು ಎಣಿಸಿ, ಒಂಬತ್ತು ವರುಷದ ಎಳೆ ಹುಡುಗಿಯನ್ನು ಅವನು ಮದುವೆಯಾಗಿದ್ದ. ಅಂತಹ ದುರ್ಲಭಳಾದ ಪತ್ನಿ ಬಾಲಿಕಾ ವಯಸ್ಸಿನಲ್ಲಿಯೇ ಮಾತೃಪದಕ್ಕೇರಿ ಹೆಣ್ಣು ಮಗುವನ್ನು ಪರದೇಶಿಯಾಗಿ ಮಾಡಿ ಹೊರಟು ಹೋದಳು. ಆಕೆಯ ಅಭಾವದಿಂದಾದ ಕೊರತೆಯನ್ನು ತಿರುಗಿ ತುಂಬಿ ಕೊಳ್ಳಬೇಕಾದರೆ ಸಾವಿರಗಟ್ಟಲೆ ಗಂಟನ್ನು ಅಣಿಮಾಡಬೇಕು; ಇಲ್ಲದಿದ್ದರೆ ಮನೆ ಆಜನ್ಮವೂ ಶೂನ್ಯ !

ಗೋವರ್ಧನನು ಮನೆಯೊಳಗೆ ಬಂದು ನಮಸ್ಕಾರ ಮಾಡಿ ಎದ್ದು ನಿಲ್ಲುತ್ತಲೇ, ವಂಶಲೋಚನರು ಮ್ಲಾನವದನದಿಂದ ಕಡ ತಂದ ನಗೆಯನ್ನು ನಕ್ಕು, "ಓ, ಈಕೆ ಯಾರು ಗೋವರ್ಧನ ?" ಎಂದು ಕೇಳಿದರು.

ಗೋವರ್ಧನನು ಕಣ್ಣಲ್ಲಿ ನೀರು ತಂದು, ನಾಲ್ಕು ವರುಷದ ಎಳೆ ಮಗುವಿನ ತಲೆಯ ಮೇಲೆ ಕೈಯಿಟ್ಟು, ತೊಡೆಯ ಹತ್ತಿರಕ್ಕೆ ನೆಳೆದುಕೊಂಡು ಹೇಳಿದ: "ನನ್ನ ಮಗಳೇ ಬಾಬು. ತಬ್ಬಲಿಯಾಗಿದ್ದಾಳೆ, ಆದುದರಿಂದ ನನ್ನನ್ನು ಬಿಟ್ಟು ಇರುವುದೇ ಇಲ್ಲ."

ಕಂಬನಿ ಮಿಡಿದು ವಂಶಲೋಚನರು ಹಾಹಾ ಎಂದು ನಗುತ್ತ ಎಂದರು: "ಕಾಲೀಮಾತೆ ನಿನ್ನಿಂದಲೂ ಬಲಿ ತೆಗೆದುಕೊಂಡಳೆ ? ಸರಿ ಸರಿ, ಸರ್ವ ನಾಶಿನಿಯಾದ ಕಾಲಿಯ ಎದುರಿನಲ್ಲಿ ನಾವು ಯಾರು ಗೋವರ್ಧನ !"

ಮಾತನಾಡುತ್ತಿದ್ದಹಾಗೆ ವಂಶಲೋಚನರ ಕಣ್ಣುಗಳಿಂದ ಅಶ್ರುಗಳು ಉದುರಿದವು. ಗೋವರ್ಧನನೂ ಉತ್ತರೀಯದ ಸೆರಗಿನಿಂದ ಕಣ್ಣೊರಸಿಕೊಂಡ. ಹೈಮವತಿ ಒಳಗಿನಿಂದ ಕಣ್ಣುಗಳನ್ನು ಒರಸಿಕೊಳ್ಳುತ್ತ ಹೊರಗೆ ಬಂದು, ಗೋವರ್ಧನನ ತೊಡೆಯ ಬಳಿಯಿಂದ ಅನಾಥ ಮಗುವನ್ನು ಸಟಕ್ಕನೆ ಎತ್ತಿ ಕೊಂಡಳು.

ಮಗು ಇವಳಾರೆಂಬ ಜಿಜ್ಞಾಸುದೃಷ್ಟಿಯಿಂದ ತಂದೆಯನ್ನು ನೋಡಿತು. ಅದಕ್ಕೆ ಗೋವರ್ಧನನು ಮುಗ್ಧಸಂಭ್ರಮದಿಂದ ಹೇಳಿದ: "ಈಕೆ ನಿನ್ನ ಪ್ರೀತಿಯ ಅವ್ವ ಮಗೂ!"

ಈ ಮೊದಲು ಮಗು 'ಅವ್ವ ಎಲ್ಲಿ?' ಎಂದು ಹಂಬಲಿಸಿ ಕೇಳಿದಾಗೆಲ್ಲ 'ಆಕೆ ಸ್ವರ್ಗಕ್ಕೆ ದೇವರ ಹತ್ತಿರ ಹೋಗಿದ್ದಾಳೆ, ನೆಟ್ಟಗಾಗಿ ಬರುತ್ತಾಳೆ, ಬರುವ ಮುಂದೆ ಚೆಲೋ ಚೆಲೋ ಗೊಂಬೆಗಳನ್ನು ನಿನಗೆ ತರುತ್ತಾಳೆ' ಎಂದು ಸಂತಯಿಸುತ್ತಿದ್ದ ಗೋವರ್ಧನ. ಈಗ ಹೈಮವತಿಯನ್ನು ತಾಯಿಯೆಂದು ಗುರುತು ಮಾಡಿಕೊಟ್ಟುದರಿಂದ, ತನ್ನ ಅವ್ವನೇ ಸ್ವರ್ಗದಿಂದ ನೆಟ್ಟಗಾಗಿ ಬಂದಿದ್ದಾಳೆಂದು ಆ ಮಗು ತಿಳಿದುಕೊಂಡಿತು. ಸ್ವರ್ಗದಲ್ಲಿ ಎಲ್ಲವೂ ಸುಂದರ ವಾಗಿರುವುವೆಂದೂ ಅವನು ಹೇಳುತ್ತಲಿದ್ದ.—ಅಲ್ಲಿ ತನ್ನ ಅವ್ವನೂ ಇಷ್ಟು ಸುಂದರಳಾಗಿ ಬಂದಿರಬೇಕೆಂದು ಅದು ನಂಬಿತು.

"ಅವ್ವಾ, ನಿನಗೆ ನೆಟ್ಟಗಾಗಿದೆಯೆ? ಮತ್ತೆ ಹೋಗುವುದಿಲ್ಲವೇ? ಸೊಗ್ಗದಿಂದ ನನಗೆ ಚೆಲೋ ಚೆಲೋ ಗೊಂಬೆ ತಂದಿದ್ದೀಯಾ?" ಎಂದು ಹೈಮವತಿಯ ಕೊರಳಿಗೆ ತಕ್ಕೆಬಿದ್ದು ಮಗು ಕೇಳಿತು.

ಅದರ ಮಾತಿನ ತಾತ್ಪರ್ಯ ಹೈಮವತಿಗೆ ಅರ್ಧಮರ್ಧ ತಿಳಿಯಿತು. "ನಿನಗೆ ಬಹಳ ಗೊಂಬೆಗಳನ್ನು ಕೊಡುತ್ತೇನೆ ನಿನ್ನ ಹೆಸರೇನು ಮಗೂ?" ಎಂದಳವಳು.

ಮಗುವಿಗೆ ಆಶ್ಚರ್ಯವಾಯಿತು. "ಹೋ, ನನ್ನ ಹೆಸರು ಮರೆತು ಬಿಟ್ಟೆಯಾ? ನನ್ನ ಹೆಸರು ಅನು." ಎಂದು ಹೇಳಿತು.

ಗೋವರ್ಧನನು ಶೋಕಮಿಶ್ರಿತವಾದ ನಗೆ ನಕ್ಕು ಹೇಳಿದ: "ಈಕೆಯ ಹೆಸರು ಅನ್ನಪೂರ್ಣಾ; ಅನು ಎಂದು ಕರೆಯುತ್ತೇವೆ. ನಿನ್ನ ತಾಯಿ ಸ್ವರ್ಗಕ್ಕೆ ಹೋಗಿದ್ದಾಳೆ, ಗುಣವಾದೊಡನೆ ತಿರುಗಿ ಬರುತ್ತಾಳೆ, ಎಂದು ಹೇಳುತ್ತ ಬಂದಿದ್ದೇನೆ; ಅದಕ್ಕೇ ಹೀಗೆ ಪ್ರಶ್ನೆ ಮಾಡುತ್ತದೆ."

ಹೈಮವತಿಯ ಕಣ್ಣುಗಳು ಅಶ್ರುಪೂರ್ಣವಾದವು. ಮಗು ತಾಯಿ ಯೊಡನೆ ಒಳಗೆ ಹೋಗಬೇಕೆಂಬ ಅಭಿಲಾಷೆಯಿಂದ, "ಅವ್ವಾ, ನನಗೆ ಗೊಂಬೆ ಯಾವಾಗ ಕೊಡುತ್ತೀಯವ್ವಾ?" ಎಂದು ಕೇಳಿತು.

"ನಡೆ ಮಗೂ, ಈಗಲೇ ಕೊಡುತ್ತೇನೆ."

ಅನ್ನಪೂರ್ಣೆಯನ್ನೆತ್ತಿಕೊಂಡು ಹೈಮವತಿ ತನ್ನ ಕೋಣೆಗೆ ಹೋದಳು. ಅವಳ ಕಪಾಟಿನಲ್ಲಿ ಅವಳ ಚಿಕ್ಕಂದಿನ ಹಲವು ಆಟಿಗೆ ಗೊಂಬೆಗಳಿದ್ದವು. ಕೆಲವನ್ನು ಹೊರಗೆ ತೆಗೆದು ಅನುವಿಗೆ ಆಡಲು ಕೊಟ್ಟಳು. ಆ ತೆರದ ಆಟಿಗೆ ಗಳನ್ನು ಆ ಮಗು ಮೊದಲೆಂದೂ ನೋಡಿರಲಿಲ್ಲ. ತಮ್ಮೂರಿನ ಬಡಿಗೇರಣ್ಣ ಮಾಡಿದ, ತಮ್ಮ ಅಪ್ಪ ಬಣ್ಣ ಕೊಟ್ಟು ಇದ್ದುದರಲ್ಲಿಯೇ ಚೆಂದ ಮಾಡಿದ ಆಟಿಗೆಯೇ ಆಟಿಗೆ ಇಷ್ಟು ದಿನ. ಇಲ್ಲಿಯ ಗೊಂಬೆಗಳು ತದ್ರೂಪ ಮುದ್ದಾದ ಮಗುವಿನಂತೆ, ಇಲ್ಲಿಯ ಪ್ರಾಣಿಗಳು ತದ್ರೂಪ ಪ್ರಾಣಿಗಳಂತೆ, ಈಗ ಎದ್ದು ಆಡ್ತಾಡುವವೇನೋ ಎಂಬಂತೆ. ಅಲ್ಲದೆ ಕುದುರೆ ಬಂಡಿ, ಉಗಿಬಂಡಿ ಮೊದ ಲಾದವು ಬೇರೆ. ನೋಡಿ, ಇವು ನಿಜಕ್ಕೂ ಸ್ವರ್ಗದ ಮಕ್ಕಳ ಆಟದ ಒಡವೆ ಗಳು. ಅವ್ವ ತನಗಾಗಿ ಅಲ್ಲಿಂದ ತಂದಿರುವಳು ಎಂಬ ಮಾತು ಅನುವಿಗೆ ದೃಢ ವಾಯಿತು.

"ಅವ್ವಾ, ನಮ್ಮೂರಿಗೆ ಎಂದು ಬರುತ್ತೀ?" ಕೇಳಿದಳು ಅನ್ನಪೂರ್ಣೆ.

ಹೈಮವತಿ ಒತ್ತಿ ಬರುವ ನಿಟ್ಟುಸಿರನ್ನು ಒಳಗೇ ಹತ್ತಿಟ್ಟು ಮಗುವನ್ನು ತಬ್ಬಿಕೊಂಡಳು. "ಸ್ವರ್ಗಕ್ಕೆ ಹೋದವರು ತಿರುಗಿ ಬರಬಾರದು, ತಂಗೀ. ನಾನು ಇಲ್ಲಿಯೇ ಇರುತ್ತೇನೆ. ನೀನು ನಿನ್ನ ತಂದೆಯೊಡನೆ ವರುಷ ವರುಷವೂ ಬಂದು, ನನ್ನ ಹತ್ತಿರ ಕೆಲವು ದಿವಸ ಇದ್ದು ಹೋಗಬೇಕು" ಎಂದು ಉತ್ತರ ವಿತ್ತಳು.

"ದುರ್ಗಾಮಾತೆ ಅಪ್ಪನ ಮನೆಗೆ ಮೂರೇ ದಿವಸ ಬರುತ್ತಾಳೆ; ಸ್ವರ್ಗದ ಜನರೆಲ್ಲಾ ಹೀಗೇ ಏನು?" ಎಂದು ಪುನಃ ಪ್ರಶ್ನಿಸಿದಳು.

"ಹೂಂ ಮಗೂ" ಎಂದು ಸಜಲ ನೇತ್ರಗಳಿಂದ ಹೇಳಿದಳು ಹೈಮವತಿ.

ಅನು ಅಷ್ಟಕ್ಕೆ ಸುಮ್ಮನಾಗಿ ಆಟಿಗೆಗಳಲ್ಲಿಯೇ ಮನಸವನ್ನು ತೊಡಗಿಸಿ ದಳು. ಹೈಮವತಿ ಕರುಣಾರ್ದ್ರ ವಿಷಣ್ಣ ದೃಷ್ಟಿಯಿಂದ ಅವಳನ್ನೇ ನೋಡುತ್ತ ಕುಳಿತಳು.

ಕೆಲಹೊತ್ತಿನಲ್ಲಿ ಯುವಕನೊಬ್ಬನು ಬಂದು ಬಾಗಿಲ ಬಳಿ ನಿಂತು ಮೃದುಸ್ವರದಿಂದ ಕೂಗಿದ: "ಹೇಮ!"

ಹೈಮವತಿ ಸೆರಗನ್ನು ಸರಿಪಡಿಸಿಕೊಂಡು ಎದ್ದು ನಿಂತಳು. ಅವಳ

ವಿಷಾದ ಪೂರ್ಣವಾದ ಮುಖವು ಕತ್ತಲೆಯ ರಾತ್ರಿಯ ನೀಲ ಆಕಾಶದಲ್ಲಿಯ ತಿಂಗಳ ಕದಿರಿನಂತೆ ಸುಂದರ ಹಾಸ್ಯರೇಖೆಯಿಂದ ಒಮ್ಮೆಲೆ ಉದ್ಭಾಸಿತ ವಾಯಿತು ಅವಳ ನಯನದ್ವಯದ ಸ್ವಚ್ಛಜ್ಯೋತಿಯಲ್ಲಿ ಹೃದಯಾಂತರಾಳದ ಸಮಸ್ತ ಆನಂದವು ಹೊರಹೊಮ್ಮಲು ಹಣೆಯಿಕ್ಕುತ್ತಿತ್ತು. ಶೋಕಾರ್ತಳಾದ ವಿಧವೆ ಹೈಮವತಿ ಮುಹೂರ್ತದಲ್ಲಿಯೆ ಪತಿಸಂಯೋಗಕ್ಕಾಗಿ ಉತ್ಸುಕಳಾದ ನವ ವಧುವಿನಂತೆ ಶ್ರೀಮತಿಯಾದಳು.

ಯುವಕನ ಹೆಸರು ತರಲ. ಇಬ್ಬರೂ ಚಿಕ್ಕಂದಿನ ಆಟದ ಸಂಗಾತಿಗಳು. ಸಂಜೆಯ ಮುಂದೆ ಒಮ್ಮೆಯಾದರೂ ಭೆಟ್ಟಿಯಾಗದಿದ್ದರೆ ಇಬ್ಬರಲ್ಲಿ ಯಾರಿಗೂ ಸಮಾಧಾನವಾಗುತ್ತಿರಲಿಲ್ಲ. ಅವನಾದರೂ ಇಲ್ಲಿಗೆ ಬರಬೇಕು, ಇಲ್ಲವೆ ಹೈಮವತಿಯಾದರೂ ಏನೊಂದು ನೆವದಿಂದ ಅವನ ಕಡೆ ಹೋಗಬೇಕು. ಇಬ್ಬರ ಆತುರವೂ ಒಟ್ಟಾಗಿ ಇಬ್ಬರಿಗೂ ಮೇಲಿಂದ ಮೇಲೆ ಭೆಟ್ಟಿ ಮಾಡಿಸುತ್ತಿತ್ತು. ವಂಶಲೋಚನರು 'ಕಾಲೀ ಕೈವಲ್ಯದಾಯಿನೀ' ಎಂಬ ಗ್ರಂಥವನ್ನು ಬರೆಯುತ್ತಲಿದ್ದರು; ಅದು ಯಾವಾಗ ಮುಗಿಯುವುದೆಂಬ ಕುತೂಹಲದಿಂದ ತರಲನು ಇವರ ಮನೆಗೆ ದಿನಕ್ಕೆ ಇಪ್ಪತ್ತು ಸಲ ಬಂದು ಹೋಗುತ್ತಲಿದ್ದ; ಯುವಕನ ಈ ಧರ್ಮಾನುರಾಗವನ್ನು ಕಂಡು ವೃದ್ಧ ವಂಶ ಲೋಚನರು ಅವನನ್ನು ಬಹುವಾಗಿ ಮೆಚ್ಚಿದರು. ಮಕ್ಕಳನ್ನು ಕಳೆದುಕೊಂಡ ವಂಶಲೋಚನರ ಶೋಕಾರ್ತ ಪಿತೃಸ್ನೇಹವು ತರಲನ ಅವಲಂಬನದಿಂದ ಎದ್ದು ಕುಳಿತುಕೊಳ್ಳಲು ಪ್ರಯತ್ನಿಸುತ್ತಲಿತ್ತು.

" ಈಕೆ ಯಾರು ? " ಅನುವನ್ನು ಅನುಲಕ್ಷಿಸಿ ತರಲನು ಹೈಮವತಿಯನ್ನು ಕೇಳಿದ.

" ಹುಡುಗಿ ! " ಕುಟಿಲ ಹಾಸ್ಯದೊಡನೆ ಹೈಮವತಿ ಉತ್ತರವಿತ್ತಳು.

" ತಂದೆ ? " ತರಲನು ನಕ್ಕು ಪ್ರಶ್ನಿಸಿದ.

" ಗೋವರ್ಧನಭಾಸ್ಕರ. "

ದನಿಯನ್ನು ಕೇಳಿ ವಂಶಲೋಚನರು ಕೂಗಿ ಕೇಳಿದರು : " ಹಿಮೂ, ತರಲ ಬಂದಿದ್ದಾನೇನು ? ಅವನನ್ನು ಇಲ್ಲಿ ಕಳಿಸಮ್ಮಾ, 'ಕಾಲೀ ಕೈವಲ್ಯ-ದಾಯಿನಿ 'ಯ ಹದಿಮೂರನೆಯ ಅಧ್ಯಾಯ ಬರೆದಾಗಿದೆ. "

ಹೈಮವತಿ ನಗುತ್ತ ತರಲನಿಗೆಂದಳು: “ ಹೋಗಿನ್ನು ಭೋಗಿಸು ! ”

“ ಭೋಗವತಿಯ ದರ್ಶನದಿಂದ ಎಲ್ಲ ಭೋಗಗಳೂ ಕೈಗೂಡುವವು. ” ತರಲನು ಹೋಗುಹೋಗುತ್ತ, ತಿರುಗಿ ನೋಡಿ ಮುಗುಳು ನಗೆ ಸೂಸುತ್ತ ನುಡಿದ.

ತರಲನ ಹಿಂದೆ ಹಿಂದೆ ಅನುವನ್ನೆತ್ತಿಕೊಂಡು ಹೈಮವತಿ ಬರುವುದನ್ನು ಗೋವರ್ಧನ-ವಂಶಲೋಚನರು ನೋಡಿದರು. ಈಕೆ ವಿಷಾದ ಮೂರ್ತಿ ಹೈಮವತಿಯಲ್ಲ; ಶಿಶುಲಕ್ಷ್ಮಿಯನ್ನೆತ್ತಿಕೊಂಡು ಗೌರಿ ಹೈಮವತಿ ಶಿವನನ್ನು ಅರಸುತ್ತ ಹೊರಟಿದ್ದಾಳೇನೋ !

“ ತಾಯಿ, ಯೋಗವಾಯಿತು ! ” ಎಂದು ವಂಶಲೋಚನರು ಸಜಲ ನೇತ್ರರಾಗಿ ಉದ್ಗಾರ ತೆಗೆದರು.

ಹೈಮವತಿ ನಗುನಗುತ್ತ ಗೋವರ್ಧನನಿಗೆ ನುಡಿದಳು: “ ಅನು ನನ್ನನ್ನು ಮೆಚ್ಚಿದ್ದಾಳೆ, ನಾನೀಕೆಯನ್ನು ಬಿಡುವುದಿಲ್ಲ. ”

ಅನು ಗೊಂಬೆಗಳನ್ನು ಹಿಡಿದ ಕೈಗಳಿಂದಲೇ ಹೈಮವತಿಯ ಕೊರಳನ್ನು ತಬ್ಬಿಕೊಂಡು ಅಪ್ಪನಿಗೆ ಹೇಳಿದಳು: “ ಅಪ್ಪಾ, ನಾನು ಅಪ್ಪನನ್ನು ಬಿಟ್ಟು ಬರುವುದಿಲ್ಲ. ”

೨

ಗೋವರ್ಧನನು ಕಾಲೀ ಮಾತೆಗೆ ಬಣ್ಣ ಬರೆಯುತ್ತಿದ್ದ. ಹೈಮವತಿ ಅನ್ನಪೂರ್ಣೆಯನ್ನೆತ್ತಿಕೊಂಡು ಅಲ್ಲಿಯೇ ಬಂದು ನಿಂತಳು. ಕೈಯೊಳಗಿನ ಕುಂಚವನ್ನು ಕೆಳಗಿಟ್ಟು ನಗುತ್ತ ಅವನೆಂದ: “ಬಾ ತಂಗೀ, ಈ ಸಲ ಮಗುವನ್ನು ಕರೆದುಕೊಂಡು ಬಂದುದರಿಂದ ಮಾತೆಯ ಸೇವೆಗೆ ಎಷ್ಟು ತೊಂದರೆಯಾಗುವುದೋ ಎಷ್ಟು ತಡೆಯಾಗುವುದೋ ಎಂದುಕೊಂಡಿದ್ದೆ. ಆದರೆ ನೀನು ನನ್ನ ಮಗುವಿನ ಲಾಲನೆ-ಪಾಲನೆಯ ಭಾರವನ್ನು ಒಪ್ಪಿಸಿಕೊಂಡು ನನಗೆ ಬಿಡುವು ಮಾಡಿಕೊಟ್ಟೆ. ಇದೆಲ್ಲವೂ ಲೋಕಮಾತೆಯ ಲೀಲೆ ! ಆದರೆ ಈಗ ನನಗೆ ಮತ್ತೊಂದು ಕಷ್ಟ ಎದುರಿಗೆ ಕಾಣುತ್ತಿದೆ: ಮಗುವನ್ನು ಪರವೇಶಿ ಮಾಡಿ ಕರೆದುಕೊಂಡು ಹೋಗಬೇಕಾಗುವುದಲ್ಲ ಎಂದು ”

ಗೋವರ್ಧನನ ಮ್ಲಾನವದನವನ್ನು ಕಂಡು ಹೈಮವತಿಯೆಂದಳು:

" ಅನುವನ್ನು ನನ್ನ ಹತ್ತಿರವೇ ಬಿಟ್ಟು ಹೋಗಿರಿ; ಇಲ್ಲಿ ಈಕೆ ನೆಮ್ಮದಿಯಿಂದ ಇರುವಳು. "

" ಇವಳೇನೋ ನೆಮ್ಮದಿಯಿಂದಲೇ ಇರುವಳು, ಸಂದೇಹವಿಲ್ಲ ನನಗೇ ಮನೆ ಭಣಭಣ ಆಗುವುದು. "

" ನಾನು ಅಪ್ಪನನ್ನು ಕರೆದುಕೊಂಡೇ ಊರಿಗೆ ಬರುತ್ತೇನೆ, ಅಪ್ಪಾ " ಎಂದಳು ಅನ್ನಪೂರ್ಣೆ.

ಗೋವರ್ಧನ ಹೈಮವತಿ ಇಬ್ಬರೂ ನಕ್ಕರು.

ಆ ಕಡೆ ಬರುತ್ತಲಿದ್ದ ವಂಶಲೋಚನರು ನಗೆಯನ್ನು ಕೇಳಿ ಸಜಲ-ನಯನರಾಗಿ, ' ಇದೇನು ? ತಾಯಿ ಸರ್ವನಾಶಿನೀ, ಈ ಮನೆಯೊಳಗೆ ಮತ್ತೆ ನಗೆ ! ಇದೇನು ನಿನ್ನ ಲೀಲೆಯೋ ! ' ಎಂದುಕೊಂಡರು.

ವಂಶಲೋಚನರು ಭಕ್ತಿಭರಿತರಾಗಿ ಕೈಜೋಡಿಸಿಕೊಂಡು ಕಾಲಿಯ ಎದುರಿಗೆ ನಿಂತರು. ತಮ್ಮ ಕಳೆದುಕೊಂಡ ಪ್ರಿಯವಸ್ತುಗಳೆಲ್ಲ ಆ ಚಿನ್ಮಯಿಯ ಮೂರ್ತಿಯಲ್ಲಿ ಸಂಗ್ರಹವಾಗಿರುವಂತೆ ಅವರಿಗೆ ತೋರಿತು. ಎವೆಯಿಕ್ಕದೆ ಆ ಕಡೆ ನೋಡುತ್ತಿದ್ದಹಾಗೆ ಅವರ ಕಂಬನಿ ಇಂಗಿತು. ಮುಖದಲ್ಲಿ ನಗೆ ಮೂಡಿತು. ಬಹಳ ಹೊತ್ತು ನೀರವವಾಗಿದ್ದು ಅವರೆಂದರು: " ನೋಡಿದೆ ಯಾಮ್ಮ ಹಿಮೂ, ಸರ್ವನಾಶಿನಿಯ ರೂಪವನ್ನು ! ಜಗತ್ಬ್ರಹ್ಮಾಂಡದ ಸಕಲ ಮಂಗಲಗಳೂ ಒಟ್ಟಾಗಿರುವ ರೂಪವನ್ನು! ಎಷ್ಟು ಜನರ ಎಷ್ಟು ಮಂಗಲಗಳು ಇಲ್ಲಿ ಮೈವೆತ್ತು ನಿಂತಿವೆ ! "

ಅಷ್ಟರಲ್ಲಿ ತರಲನು ಬಂದು ಹೈಮವತಿಯ ಪಕ್ಕದಲ್ಲಿ ನಿಂತುಕೊಂಡ. ಅವನು ನಗುವಿನೊಡನೆ ಅವಳನ್ನು ಸಂವರ್ಧಿಸಿದ. ಆದರೆ ಅವಳ ಬಾಡಿದ ಮೊಗವು ಕಿಂಚಿತ್ ಕಳೆಗೊಂಡಿತು, ಅಷ್ಟೆ; ಅಲ್ಲಿ ನಗೆ ಹುಟ್ಟಲಿಲ್ಲ. ವಂಶಲೋಚನರು ಯಾರು ಬಂದರೆಂದು ಮುಖ ಹೊರಳಿಸಿ ನೋಡಿ, ಪುನಃ ತಮ್ಮಷ್ಟಕ್ಕೆ ತಾವೇ ಎಂದುಕೊಂಡರು: ' ಕಳೆದುಕೊಂಡುದೆಲ್ಲವೂ ದೊರೆಯುವುದಿಲ್ಲಿ. '

" ರವಿ ಬಾಬುಗಳ ಹೊಸ ಕವಿತೆಯೊಂದು ಪ್ರಕಟವಾಗಿದೆ. ಅದರಲ್ಲಿ ಅವರು ಇದನ್ನು ' ಎಲ್ಲ ಪಡೆಯುವ ದೇಶ ' ಎಂದಿರುವರು. " ತರಲನೆಂದ.

ವಂಶಲೋಚನರು ಹಿಗ್ಗಿನಿಂದ ನುಡಿದರು: " ಹಾಗಲ್ಲಗಿದ್ದರೆ ಕವಿಯೆ ?

ನೀನು ಕೊಟ್ಟಿದ್ದ ' ನೈವೇದ್ಯ ' ಪುಸ್ತಕವನ್ನು ಓದಿದೆ ತರಲ; ಒಳ್ಳೇ ತೃಪ್ತಿಯಾಯಿತು. ಈ ಕವಿತೆ ಯಾವ ಪುಸ್ತಕದಲ್ಲಿದೆ ? "

" ಅದರ ಹೆಸರು ' ನೌಕಾಯಾನ.' ನೈವೇದ್ಯಕ್ಕಿಂತಲೂ ಇದರಲ್ಲಿ ಕವಿಯೊಡನೆ ಬ್ರಹ್ಮಸಂಯೋಗ ಘನಿಷ್ಠವಾಗಿದೆ, ಹೆಚ್ಚು ಮಧುರವಾಗಿದೆ. "

ಹರ್ಷೋತ್ಫುಲ್ಲ ಸ್ವರದಿಂದ ವಂಶಲೋಚನರು, " ಮಾತೆ, ಬ್ರಹ್ಮ-ಮಯಿ, ನಿನ್ನ ಈ ಅಧಮ ಸಂತಾನವನ್ನೂ ನೀನು ಕ್ರಮಕ್ರಮವಾಗಿ ನಿನ್ನ ಮಡಿಲ ಕಡೆ ಸೆಳೆದುಕೊಳ್ಳಲಿರುವೆ ! ಮಾಯೆಯ ಸೋಪಾನದಲ್ಲಿ ಅರ್ಧ ಮಾತ್ರ ಉಳಿಸಿರುವೆ; ಆ ಮುರಿದ ಮೆಟ್ಟಿಲನ್ನು ದಾಟಿದರೆ ತೀರಿತು !" ಎಂದರು.

ಆ ಮುರಿದ ಮೆಟ್ಟಿಲು ಯಾರೆಂಬುದು ಹೈಮವತಿಗೆ ಗೊತ್ತಾಯಿತು. ಅವಳ ಕಣ್ಣುಗಳಲ್ಲಿ ಮತ್ತೆ ಕಂಬನಿಗಳು ತೋರಿದವು. ಆದರೆ ವಂಶಲೋಚನರು ಹಸನ್ಮುಖದಿಂದಲೇ ತರಲನಿಗೆಂದರು : " ಆ ಪುಸ್ತಕವನ್ನು ನನಗೆ ತಂದು ಕೊಡು, ತಪ್ಪಾ. "

" ಅದನ್ನು ನಾನು ಕೊಂಡಿದ್ದೇನೆ ಮಾಮಾ. ಇಪ್ಪತ್ತು ಬಾರಿ ಓದಿದೆ. ಈವೊತ್ತು ನಿಮಗೆ ತಂದುಕೊಡುತ್ತೇನೆ. "

" ನಿನಗೆ ಈ ಎಳವಯಸ್ಸಿನಲ್ಲಿಯೇ ಇಷ್ಟೊಂದು ಧರ್ಮಾನುರಾಗ ! ಇದು ಮಾತೆಯ ವಿಶೇಷ ಕೃಪೆಯೆಂದೇ ತಿಳಿ. ನೀನು ಉತ್ತಮ ಹುಡುಗ. " ಎಂದು ವಂಶಲೋಚನರು ಆನಂದಿತರಾಗಿ ನುಡಿದರು.

ಹೈಮವತಿಯ ಕಡೆಗಿದ್ದ ತರಲನ ಕೊನೆಗಣ್ಣು-ಕೊನೆದುಟಿಗಳಲ್ಲಿ ಮುಗುಳುನಗೆ ಸೂಸಿತು. ಅವಳ ಮುಖ ಯಾವುದೋ ಲಜ್ಜೆಯಿಂದ ಕೆಂಪಾಯಿತು. ಅವಳು ಆಸನವನ್ನೆತ್ತಿಕೊಂಡು ಮನೆಯೊಳಕ್ಕೆ ಹೊರಟುಹೋದಳು.

" ತರಲ, ' ಕಾಲೀ ಕೈವಲ್ಯದಾಯಿನಿ 'ಯ ಕೆಲವಂಶ ಮುಂದುವರಿದಿದೆ, ಕೇಳುವೆಯಾ ? " ವಂಶಲೋಚನರೆಂದರು.

" ನಡೆಯಿರಿ " ಕುತೂಹಲಭಾವದಿಂದ ತರಲ ಹೇಳಿದ.

ಇಬ್ಬರೂ ಹೊರಟುಹೋದರು. ಗೋವರ್ಧನನು ದೀರ್ಘನಿಃಶ್ವಾಸವೊಂದನ್ನು ಹೊರಹೊಮ್ಮಿಸಿ, ಪುನಃ ಕುಂಚವನ್ನು ತೆಗೆದುಕೊಂಡು ದೇವಿಯನ್ನು ಬಣ್ಣಿಸುವುದರಲ್ಲಿ ಮಗ್ನನಾದ.

*

೩

ಇಂದು ರಾತ್ರಿ ಕಾಲೀಪೂಜೆ. ತರಲ ಹೈಮವತಿಯರು ಅಕ್ಕಪಕ್ಕದಲ್ಲಿ ನಿಂತು ಬಣ್ಣವಿತ್ತ ದೇವೀಮೂರ್ತಿಯನ್ನು ನೋಡುತ್ತಿದ್ದರು. ಗೋವರ್ಧನನು ಈ ಸಲ ಸೂಕ್ಷ್ಮ ಕುಂಚದಿಂದ ಚಿತ್ರಿಸಿ ವಿಶೇಷ ಕಲಾಕೌಶಲವನ್ನು ತೋರಿಸಿದ್ದ. ಹೈಮಮತಿ ನಗುಮೋರೆಯಿಂದ ಮುಗ್ಧದೃಷ್ಟಿಯಿಂದ ನೋಡುತ್ತ "ಈ ಸಲ ಎಷ್ಟು ಸುಂದರವಾಗಿದೆ ಮೂರ್ತಿ!" ಎಂದಳು.

ಹರ್ಷಚಿತ್ತದಿಂದ ನೋಡುತ್ತಲಿದ್ದ ತರಲನು ಒಮ್ಮೆಲೆ ನಗುತ್ತ ನುಡಿದ: "ನೋಡು ನೋಡು, ಶಿವನ ತೊಡೆಯ ಮೇಲೆ ಪಾರ್ವತಿ, ಅವಳ ತೊಡೆಯ ಮೇಲೆ ಶಿಶು ಲಕ್ಷ್ಮಿ; ಇದು ಯಾರಂತೆ ಕಾಣುವುದು ಹೇಳು ನೋಡುವಾ."

ಕೊಂಚ ಹೊತ್ತು ಗಂಭೀರವಾಗಿ ನೋಡಿ, ಉಲ್ಲಾಸದಿಂದ ಕಳೆಗೊಂಡ, ನಾಚಿಕೆಯಿಂದ ನಸುಗೆಂಪಾದ ಮೊಗದಿಂದ ಹೈಮವತಿ ನುಡಿದಳು: "ಯಾರಂತೆ ಆಗುವುದು ಮತ್ತೆ? ಯಾರಂತೆಯೂ ಇಲ್ಲ."

"ಇಲ್ಲದಿರಬಹುದು. ನನ್ನ ಕಣ್ಣಿಗೆ ಮಾತ್ರ ಯಾರ ಮುಂಕುಕಾಡಿಗೆ ಹತ್ತಿದೆಯೋ ಎಲ್ಲೆಲ್ಲಿಯೂ ಅವರ ಹೋಲಿಕೆಯೇ ಕಾಣುವುದು!" ತರಲನೆಂದ.

"ಲಕ್ಷ್ಮಿಯ ಮುಖ ಮಾತ್ರ ಅನ್ನಪೂರ್ಣೆಯ ಮುಖ ಹೋಲಿದೆ. ತಂದೆಯ ಪ್ರೀತಿ ಚಿತ್ರದಲ್ಲಿಯೂ ಮಗಳನ್ನು ಮೂಡಿಸಿದೆ." ಎಂದೆನ್ನುತ್ತ ಕಟಾಕ್ಷವನ್ನು ಬೀರಿದಳು ಹೈಮವತಿ.

"ವಿಲಕ್ಷಣ ಅಭಿರುಚಿ! ಮಗಳನ್ನು ಮಾತ್ರ ಚಿತ್ರಿಸಿ ತೃಪ್ತಿಯಿಲ್ಲ. ಅವಳ ತಾಯಿಯನ್ನೂ ಚಿತ್ರಿಸಿದ್ದಾನೆ. ಮುದುಕ ಶಿವನನ್ನು ತನ್ನಂತೆ ರೂಪಿಸುವ ಇಚ್ಛೆಯಿದ್ದಿತೇನೋ, ಅದು ಸಾಧಿಸಿಲ್ಲ."

ತರಲನ ಚೇಷ್ಟೆಯಿಂದ ಆಕಂಠ ಆರಕ್ತಳಾಗಿ ಅವಳೆಂದಳು: "ಆಃ, ಇದೇನು ಹೇಳುತ್ತಿರುವೆ ನೀನು!"

ತರಲನು ಸಕ್ಕು ಇನ್ನೂ ಏನೋ ಮಾತನಾಡಲಿದ್ದ. ವಂಶಲೋಚನರು ಆ ಕಡೆಗೇ ಬರುತ್ತಿರುವುದನ್ನು ಕಂಡು ಎಚ್ಚರುಗೊಂಡು ಮೆಲ್ಲನೆ ಹೈಮವತಿಗೆ ಉಸುರಿದ: "ಮಾಮಾ ಬರುತ್ತಲಿದ್ದಾರೆ."

ಹೈಮವತಿ ಸೆರಗನ್ನು ಸರಿಪಡಿಸಿಕೊಂಡು ತರಲನಿಂದ ಸ್ವಲ್ಪ ದೂರ ಸರಿದು ನಿಂತುಕೊಂಡಳು.

ವಂಶಲೋಚನರು ಬಂದು ಆನಂದಪ್ಲುತ ಸ್ವರದಲ್ಲಿ "ತಾಯಿ ಸರ್ವ-ನಾಶಿನಿಯ ರೂಪ ಎಷ್ಟು ಭುವನಮೋಹನ!" ಎಂದು ಉದ್ಗಾರ ತೆಗೆದು ಕೊಂಡಾಡಿ ಮಗಳಿಗೆಂದರು: "ನಡೆಯಮ್ಮಾ ಹಿಮೂ, ತಾಯಿಯ ಪೂಜೆಗೆ ಅಣಿಮಾಡುವ"

*   *   *   *   *

ಎರಡು ಪ್ರಹರ ರಾತ್ರಿ ಕಳೆದಿದೆ. ಕಾಲೀಪೂಜೆಯು ತರುವಾಯ ಇನ್ನು ಬಲಿದಾನ ನಡೆಯಬೇಕು. ದೀಪಾನ್ವಿನ ರಾತ್ರಿಯ ಪ್ರಭಾವಳಿಯಿಂದ ಮಂದಿ-ರದ ಪ್ರಾಂಗಣವು ಉದ್ಭಾಸಿತವಾಗಿದೆ. ಊರಿನ ಬಹು ಜನರು ತಂಡತಂಡ ವಾಗಿ ಬಂದು ಮಂದಿರದೊಳಗೂ ಅಂಗಳದೊಳಗೂ ಕಿಕ್ಕಿರಿದು ನೆರೆದಿದ್ದಾರೆ. ದೇವಿಯ ಮೂರ್ತಿಯ ಬದಿಯಲ್ಲಿ ವಂಶಲೋಚನರು ಕೈಮುಗಿದುಕೊಂಡು ನಿಂತಿದ್ದಾರೆ. ಅವರ ಎದುರುಗಡೆ, ಕಟ್ಟಿಗೆಯ ಕಟಕಟೆಯಿಂದ ಆವೃತವಾದ ಹೊರವಳಯದ ಒಂದು ಮೂಲೆಯಲ್ಲಿ ಹೈಮವತಿ; ಆಕೆಯ ಹಿಂದೆ-ಎಡ-ಬಲ ಗಳಲ್ಲಿ ಊರಿನ ಹೆಂಗಳೆಯರು. ಹೈಮವತಿ ನಿಂತಿದ್ದ ಸ್ಥಳದ ಬದಿಯಲ್ಲಿಯೆ ಮಂದಿರದ ಕಟ್ಟೆಯ ಮೆಟ್ಟಿಲು ಮೆಟ್ಟಿಲಿನ ಮೇಲುಗಡೆ ಇನ್ನೊಂದು ಪಕ್ಕದಲ್ಲಿ ಎಲ್ಲಕ್ಕೂ ಮುಂದೆ ಗೋವರ್ಧನ, ಅವನಿಂದ ಮೂರು ಮೆಟ್ಟಿಲು ಕೆಳಗಡೆ— ಹೈಮವತಿ ಚೆನ್ನಾಗಿ ಕಾಣುವ ಸ್ಥಳವನ್ನು ನೋಡಿ – ತರಲ ನಿಂತಿದ್ದಾರೆ. ಹೈಮವತಿಯ ಅಡಿಯ ಹತ್ತಿರ ಹಚ್ಚಿಟ್ಟಿದ್ದ ದೀಪದ ಬೆಳಕಿನಲ್ಲಿ ಅವಳ ಸುಂದರ ಮುಖವು ಬೆಳುದಿಂಗಳಲ್ಲಿಯ ಕುಮುದದಂತೆ ಒಪ್ಪುತ್ತಿದೆ. ತರಲನ ದೃಷ್ಟಿ, ದೇವಿಯ ಮೂರ್ತಿಯನ್ನು ತೊರೆದು, ಬಲಿದಾನವನ್ನು ಮರೆದು, ನೆರೆದ ಜನಸಮುದಾಯವನ್ನು ಅಲಕ್ಷಿಸಿ ಆ ಸೌಂದರ್ಯಜಲವನ್ನು ಈಂಟುವು ದರಲ್ಲಿಯೇ ತಲ್ಲೀನವಾಗಿದೆ. ಹೈಮವತಿ ಎತ್ತರದ ಮೇಲಿದ್ದುದರಿಂದ, ಸಹಜ ವಾಗಿ ಅವನತವಾದ ಅವಳ ದೃಷ್ಟಿ ಜನಮಂಡಲಿಯನ್ನು ನೋಡುವ ನೆವ ದಿಂದ ಒಂದೇ ವ್ಯಕ್ತಿಯ ಉತ್ಸುಕ ದೃಷ್ಟಿಯೊಡನೆ ಸಮ್ಮಿಲಿತವಾಗುತ್ತಲಿದೆ.

ಆಡು-ಕುರಿಗಳ ಬಲಿಯಾಯಿತು; ಇನ್ನು ಕೋಣದ ಬಲಿ. ಅದನ್ನು ಹಗ್ಗ ಹಚ್ಚಿ ಬಲಪೂರ್ವಕವಾಗಿ ದೇವಿಯ ಸಮ್ಮುಖದಲ್ಲಿ ಎಳೆತಂದರು.

ಪುರೋಹಿತನು ಅವರ ಪೂಜೆ ಮಾಡಿದ. ವಧಕಾರಿ ಹಣಿದು ಮಸೆದು ಹದ-ಗೊಳಿಸಿದ ಆಯುಧವನ್ನು ಸರ್ವಶಕ್ತಿಯಿಂದ ಕೋಣನ ಕೊರಳಿಗೆ ಹಾಕಿದ. ಏಟು ಸರಿಯಾಗಿ ಬೀಳಲಿಲ್ಲ. ಇನ್ನೊಂದು ಪೆಟ್ಟನ್ನು ಹಾಕಬೇಕೆಂದು ಅವನು ಆಯುಧವನ್ನು ಮೇಲೆತ್ತಿದ.

ಗೋವರ್ಧನನು ಅವನನ್ನು ತಡೆದ: "ಹಾಂ ತಾಳು, ಕೋಣವನ್ನು ಬಿಟ್ಟುಬಿಡು. ಅದನ್ನು ತಾಯಿಯೇಕೋ ತೆಗೆದುಕೊಳ್ಳಲಿಲ್ಲ."

ಒಡೆಯನ ಅಪ್ಪಣೆಯಂತೆ ಕೋಣನನ್ನು ಬಿಡಲಾಯಿತು. ಗಾಯದ ಬಾಧೆಯಿಂದ ಭಯದಿಂದ ಮತ್ತವಾಗಿದ್ದ ಅದು ಹೊರಕ್ಕೆ ಹೋಗಲು ಹಾದಿಯನ್ನು ಹುಡುಕುತ್ತ ನೆಗೆದಾಡತೊಡಗಿತು. ಅಂಗಳದಲ್ಲಿಯ ಜನರೆಲ್ಲರೂ ಹೆದರಿ ಕಟ್ಟೆಯ ಕಡೆಗೆ ಧಾವಿಸಿದರು. ಒಮ್ಮೆಗಿಲೆ ಕೋಲಾಹಲವೆದ್ದಿತು. ಅಸ್ಥಿರವಾದ ಕಟ್ಟೆಗೆಯ ಕಟಾಂಜನವು ಜನರ ನುಗ್ಗಾಟವನ್ನು ತಡೆಯದೆ ಮುರಿಯಿತು. ಆದನ್ನಾತು ನಿಂತಿದ್ದ ಹೈಮವತಿ ತರಲನ ಕಾಲಹತ್ತಿರ ಬಿದ್ದುಬಿಟ್ಟಳು. ಜನರ ನುಗ್ಗಾಟ, ಕೋಣನ ಹಾಯ್ದಾಟ, ಕಟಾಂಜನದ ಮುರಿದು ಬೀಳುವಿಕೆ—ಇವುಗಳಿಂದ ಚಕಿತಚಂಚಲನಾಗಿ ತರಲನು ಕಟ್ಟೆಯ ಮೇಲೆ ಹೋಗಿ ನಿಂತುಕೊಂಡ. ಮೇಲುಗಡೆ ನಿಂತಿದ್ದ ಗೋವರ್ಧನನು ಎವೆಯಿಕ್ಕುವುದರೊಳಗಾಗಿ ಜಿಗಿದು ಬಂದು, ಹೈಮವತಿಯ ಮೇಲೆ ತನ್ನ ದೇಹವನ್ನು ಹಂದರದಂತೆ ಆಚ್ಛಾದಿಸಿದ. ಕಂಗೆಟ್ಟ ಜನಸಮುದಾಯವು ಎಚ್ಚರಿಲ್ಲದೆ ಅವನ ಬೆನ್ನ ಮೇಲೆ ಕಾಲಿಡುತ್ತ, ಎಡವುತ್ತ ಕಟ್ಟೆಯನ್ನೇರತೊಡಗಿತು. ಮತ್ತು ಮಹಿಷವೂ ಆ ಕಡೆಗೇ ನುಗ್ಗಿ ಗೋವರ್ಧನನನ್ನು ಹಾಯ್ದು ಪಲಾಯನ ಮಾಡಿತು.

ಒಂದು ನಿಮಿಷ ಯಾರ ಮೈಮೇಲೂ ಪರಿವೆಯಿರಲಿಲ್ಲ. ನುಗ್ಗುವುದೇ ನುಗ್ಗುವುದು, ಕೂಗುವುದೇ ಕೂಗುವುದು. ಆ ಅಸಂಖ್ಯ ಜನರ ಮಧ್ಯದಲ್ಲಿ ಒಬ್ಬರು ಮಾತ್ರ ಸ್ಥಿರವಾಗಿ ಸ್ತಬ್ಧವಾಗಿ ನಿಂತುಕೊಂಡು ಎವೆಯಿಕ್ಕದ ನೋಟದಿಂದ ಕಾಲೀಮೂರ್ತಿಯನ್ನು ನೋಡುತ್ತಲಿದ್ದರು - ಅವರು ವಂಶಲೋಚನರು. ಅವರ ಎರಡು ಕಣ್ಣುಗಳಲ್ಲಿಯೂ ಕಣ್ಣೀರ ಧಾರೆ ಅವರಿಗೆ ಯಾವುದೂ ಲಕ್ಷ್ಯವಿಲ್ಲ.

ಹೈಮವತಿ ಬಿದ್ದುದನ್ನು ಮೊದಲು ಕಂಡವನು ತರಲ. ಅವನು ಜನ ಸಂದಣಿಯನ್ನು ತಳ್ಳಿಕೊಂಡು ಬಂದು, ಗೋವರ್ಧನನನ್ನು ಸರಿಸಿ, ಹೈಮವತಿ ಯನ್ನು ಎತ್ತಿ ತಬ್ಬಿ ಹಿಡಿದುಕೊಂಡ. ಆವಳು ದಾರುಣ ಉದ್ವೇಗದಿಂದ ಭಯದಿಂದ ಥರ ಥರ ನಡುಗುತ್ತಲಿದ್ದಳು. ಅವಳಿಗೆ ಬಿದ್ದ ಪೆಟ್ಟಲ್ಲದೆ ಯಾವ ಪೆಟ್ಟೂ ತಗುಲಿರಲಿಲ್ಲ. ತರಲನು ಬಳಿಯಲ್ಲಿದ್ದ ಹೆಂಗುಸರಿಗೆ "ನೀವು ಹೈಮ ವತಿಯನ್ನು ಒಳಗೆ ಕರೆದುಕೊಂಡು ಹೋಗಿರಿ; ನಾನು ಭಾಸ್ಕರನನ್ನು ಎತ್ತಿ ಕೊಂಡು ಬರುತ್ತೇನೆ." ಎಂದು ಹೇಳಿದ.

ಹೈಮವತಿಯ ಶುಶ್ರೂಷೆಗಾಗಿಯೇ ತರಲನ ಮನಸು ಹರಿಯುತ್ತಿದ್ದರೂ ಲೋಕಲಜ್ಜೆಯ ಮೂಲಕ ಆ ಕೆಲಸವನ್ನು ಬೇರೆಯವರಿಗೆ ಒಪ್ಪಿಸಿ, ತಾನು ಗೋವರ್ಧನನನ್ನು ಶುಶ್ರೂಷಿಸತೊಡಗಿದ. ಗೋವರ್ಧನನಿಗೆ ಪ್ರಜ್ಞೆ ಇರಲಿಲ್ಲ. ಜನರ ತುಳಿತದಿಂದ ಅವನ ದೇಹವೆಲ್ಲ ಕೆತ್ತಿದ್ದಿತು; ಕೋಣನ ಇರಿತದಿಂದ ಅಸ್ಥಿಪಂಜರದ ಒಂದು ಮೂಳೆ ಮುರಿದಿದ್ದಿತು. ತರಲನು ಜನಸಹಾಯ ದಿಂದ ಅವನ ಮೂರ್ಛಿತ ಶರೀರವನ್ನು ಒಳಗೆ ಸಾಗಿಸಿ, ಅಲ್ಲಿ ಬಂದಿದ್ದ ಶಶಿ ಡಾಕ್ಟರನ್ನು ಸಂಗಡ ಕರೆದುಕೊಂಡು ಹೋದ.

ವಂಶಲೋಚನರಿನ್ನೂ ಕಾಲಿಯ ಮುಂದೆ ಕೈಜೋಡಿಸಿಕೊಂಡು, ಆವಿಷ್ಟ ರಂತೆ ನಿಂತಿದ್ದರು. ಬಲಿದಾನಕ್ಕೆ ಬಾಧೆ ಬಂದುದರಿಂದ ತಾಯಿಯ ಕೋಪದ ಅಶುಭ ಫಲದ ನಿವಾರಣೆಗಾಗಿ,—ಪುರೋಹಿತರು ಹೇಳುತ್ತಿದ್ದ—ಯಾಗ ಯಜ್ಞ ಪುರಶ್ಚರಣ ...ಏನೇನು ಮಾಡಬೇಕಾಗುವುದೆಂಬುದನ್ನು ಕೇಳಿಕೊಳ್ಳುತ್ತ ಲಿದ್ದರು. ಮನುಷ್ಯವ್ಯಾಪಾರದ ಕಡೆ ಮನಸು ಹಾಕಲು ಅವರಿಗೆ ಅವಕಾಶ ವಿರಲಿಲ್ಲ; ಶಕ್ತಿಯೂ ಇರಲಿಲ್ಲ. ನೆರೆದ ಹೆಣ್ಣುಮಕ್ಕಳಲ್ಲಿ ಕೆಲವರು ಈ ಅನಾಹುತವನ್ನು ಕಂಡು ತಮ್ಮ ತಮ್ಮ ಮನೆಗೆ ತೆರಳಿದರು; ಇನ್ನು ಕೆಲವರು ನೈವೇದ್ಯ ಪ್ರಸಾದ ಯಾವಾಗಲೋ ಎಂದು ಯೋಚಿಸುತ್ತ ಅಲ್ಲಿಂದಲ್ಲಿಯೇ ಸೆರಗು ಹಾಸಿಕೊಂಡು ಒರಗಿದರು. ಆಮಂತ್ರಿತರಾದ ಪುರುಷರು ಭೋಜನದ ಅನಿಶ್ಚಿತತೆಯನ್ನು ಮನದಂದು ಒಬ್ಬೊಬ್ಬರಾಗಿ ಹೊರಟುಹೋದರು. ತರಲನು ಮಾತ್ರ ಬೇಸರಿಲ್ಲದೆ ಗಾಯಾಳುಗಳ ಆರೈಕೆಯಲ್ಲಿ ನಿರತನಾಗಿದ್ದ.

ಡಾಕ್ಟರಿಂದ ಗೋವರ್ಧನನ ಮುರಿದ ಎಲುವನ್ನು ಕಟ್ಟಿಸಿ, ದವಾಖಾನೆಗೆ

ಹೋಗಿ ಮದ್ದು ತಂದು ಹಾಕಿ, ತರಲನು ಹೈಮವತಿಯ ಕಡೆಗೆ ಹೋದ. ದೀಪಮಾಲೆಯಲ್ಲಿ ನಡುನಡುವೆ ಕೆಲವು ದೀಪಗಳು ನಂದಿದ್ದವು, ಕೆಲವು ನಂದ ಲಾಗಿದ್ದವು; ಅಮಾವಾಸ್ಯೆಯ ಕತ್ತಲು ಕ್ಷೀಣಪ್ರಕಾಶದ ಕೊನೆಗಾಲವನ್ನು ನಿರೀಕ್ಷಿಸುತ್ತ ದೀಪಮಾಲೆಯ ಪಕ್ಕದಲ್ಲಿ ದಟ್ಟವಾಗಿ ನೆರೆದಿತ್ತು. ಮನೆಯೆಲ್ಲವೂ ಸ್ತಬ್ಧ; ಉತ್ಸವದ ಲಕ್ಷಣ ಎಲ್ಲಿಯೂ ಇಲ್ಲ. ತರಲನು ಮೆಲ್ಲಮೆಲ್ಲನೆ ಹೈಮ-ವತಿಯ ಕೋಣೆಯನ್ನು ಪ್ರವೇಶಿಸಿದ. ಅವಳು ಹಾಸಿಗೆಯ ಮೇಲೆ ಮೂರ್ಛಿತ ಳಂತೆ ಬಿದ್ದುಕೊಂಡಿದ್ದಳು. ಅವನು ಹತ್ತಿರ ಹೋಗಿ ಅವಳ ಹಣೆಯನ್ನು ಮುಟ್ಟಿ ನೋಡಿದ.

ಸ್ಪರ್ಶದಿಂದ ಯಾರೆಂಬುದನ್ನು ಹೈಮವತಿ ಅರಿತಳು. ಆವೇಗ ಕಂಪಿತ ವಾದ ಕಂಠದಿಂದ, ಅಜ್ಞಾತ ಆಯಾಸದ ಮೃದುಭರ್ತ್ಸನೆಯ ಸ್ವರದಲ್ಲಿ ಅವ-ಳೆಂದಳು: " ಇಲ್ಲೇಕೆ ಬಂದೆ ನೀನು ? "

ತರಲನೂ ಮೆಲುದನಿಯಲ್ಲಿ ಮಾತನಾಡಿದ: " ಎಲ್ಲರೂ ಬಿದ್ದುಕೊಂಡು ನಿದ್ದೆಹೋಗಿದ್ದಾರೆ; ನೀನು ಹೇಗಿದ್ದೀ ? "

ಹೈಮವತಿ ಚಟ್ಟನೆ ಎದ್ದು ಕುಳಿತಳು. "ನಾನು ಚೆನ್ನಾಗಿಯೇ ಇದ್ದೇನೆ. ಅಷ್ಟೇನೂ ಹೇಳಿಕೊಳ್ಳುವಷ್ಟು ಪೆಟ್ಟು ಹತ್ತಿಲ್ಲ. ಆದರೂ ಅವರೆಲ್ಲ ಹೇಳಿ ದರು—'ನೀನು ಸ್ವಸ್ಥ ಮಲಗಿಕೋ, ನಾವೆಲ್ಲವನ್ನೂ ಮಾಡುತ್ತೇವೆ,' ಎಂದು. ನನ್ನನ್ನು ಮಲಗಿಸಿ ತಾವೂ ಎಲ್ಲರೂ ಮಲಗಿಬಿಟ್ಟರು ! ಮಾತೆಯ ಭೋಗವೂ ಜನರ ಭೋಜನಾದಿಗಳೂ ಆಗಲಿಲ್ಲವೆ ? " ಎಂದಳು.

ಅವಳು ತರಲನಿಂದ ಯಾವ ಉತ್ತರವನ್ನೂ ನಿರೀಕ್ಷಿಸದೆ ಕೋಣೆಯಿಂದ ಹೊರಹೊರಟಳು. ತರಲನು ಕಳ್ಳಹೆಜ್ಜೆಯಿಡುತ್ತ ಹೊರಗೆ ಹೋದ. ಆ ಬಳಿಕ ಹೈಮವತಿ ಕೈಯಲ್ಲಿ ದೀಪವನ್ನು ತೆಗೆದುಕೊಂಡು ಹೋಗಿ, " ಏಳಿರೇ ಏಳಿರಿ, ಇನ್ನೂ ಮಾತೆಯ ಭೋಗವಾಗಲಿಲ್ಲ; ಮಾತೆಯ ಭೋಗವಾಗದೆ ಬ್ರಾಹ್ಮಣರ ಭೋಜನವಾಗುವಂತಿಲ್ಲ; ಅಪ್ಪ ಎಲ್ಲಿದ್ದಾರೆ ? " ಎಂದು ಮಲಗಿದವರನ್ನೆಲ್ಲ ಎಬ್ಬಿಸತೊಡಗಿದಳು.

ಮಾತೆಯ ಭೋಗವಾಗಿ, ಮನೆಮನೆಗೆ ಹೋಗಿ ಊರ ಜನರನ್ನು ಎಬ್ಬಿಸಿ ಕರೆತಂದು ಅವರ ಊಟ-ಉಪಚಾರಗಳನ್ನು ಮುಗಿಸುವ ಹೊತ್ತಿಗೆ ಮೂಡಣ ದಿಕ್ಕು ಬೆಳ್ಳಗಾಯಿತು.

ಇಡೀ ರಾತ್ರಿ ಗೋವರ್ಧನನ ವಿಷಯವಾಗಿ ವಿಚಾರಿಸಲು ಹೈಮವತಿಗೆ ಅವಕಾಶ ಸಿಕ್ಕಲಿಲ್ಲ. ಅವನಿಗೆ ಎಷ್ಟು ಪೆಟ್ಟಾಗಿದೆ ಎಂಬುದನ್ನೂ ಅವಳು ಅರಿಯಳು. ನಸುಕಿನಲ್ಲಿ ಪುಷ್ಕರಿಣಿಯಲ್ಲಿ ಮಿಂದು ಅವನು ಮಲಗಿದ ಕೋಣೆಯ ಕಿಡಿಕಿಯ ಹತ್ತಿರ ಹಾಯ್ದು ಬರುವಾಗ ಅವನ ನರಳಿಕೆ ಕಿವಿಗೆ ಬಿದ್ದಿತು. ಅವಳು ಲಗುಬಗೆಯಿಂದ ಮನೆಯೊಳಗೆ ಹೋಗಿ, ಕೊಡವನ್ನಿಳಿಸಿ, ಒದ್ದೆ ಬಟ್ಟೆಯನ್ನು ಬಿಟ್ಟವಳೇ ಗೋವರ್ಧನನ ಕೋಣೆಗೆ ಹೋದಳು. ಅವನು ನಿದ್ದೆಯಲ್ಲಿಯೇ ನರಳುತ್ತಲಿದ್ದ. ಅವಳು ಮೆಲ್ಲನೆ ಹೋಗಿ ಅವನ ತಲೆದಿಂಬುದಿಸೆಯಲ್ಲಿ ನಿಂತುಕೊಂಡಳು. ಗೋವರ್ಧನನು ಕನಸು ಕಾಣುತ್ತಲಿದ್ದ; ಅವನ ಹೆಂಡತಿ ತಲೆದಿಸೆಯಲ್ಲಿ ನಿಂತಿದ್ದಾಳೆ; 'ಈಗ ಹೇಗಿದ್ದೀರಿ?' ಎಂದು ವಿಚಾರಿಸುತ್ತಲಿದ್ದಾಳೆ. ತಾನು ಹೇಗಿದ್ದೇನೆಂಬುದನ್ನು ಅರಿತುಕೊಳ್ಳಲು ಅವನು ಕೊಂಚ ಹೊರಳಿದ. ಆಗ ಅತಿಶಯವಾದ ವೇದನೆಯಿಂದ ಅವನ ಮುಖ ವಿಕೃತವಾಯಿತು. ಕಣ್ಣು ತೆರೆದ. ಒಡನೆಯೆ ಅವನ ದೃಷ್ಟಿಗೆ ಬಿದ್ದಿತು— ಹೈಮವತಿಯ ಇದೀಗ ಸ್ನಾನ ಮಾಡಿದ ಅಪರೂಪವಾದ ಅನುಕಂಪಾಕಾತರವಾದ ಮುಖ. ವೇದನೆಯಿಂದ ಬಾಡಿದ ಗೋವರ್ಧನನ ಮೋರೆ ಆನಂದದಿಂದ ಅರಳಿತು. "ಹೇಗಿದ್ದೀ ತಂಗೀ? ಹೆಚ್ಚು ಪೆಟ್ಟು ತಾಗಿಲ್ಲವಷ್ಟೆ?" ಎಂದು ಕೇಳಿದ.

ಹೈಮವತಿ ಆ ಪ್ರಶ್ನೆಗೆ ಉತ್ತರ ಕೊಡದೆ "ನಿಮಗೆ ಬಹಳ ಪೆಟ್ಟಾದಂತೆ ಕಾಣುತ್ತದೆ. ನನಗೆ ಯಾರೂ ಏನೂ ಹೇಳಲಿಲ್ಲ." ಎಂದು ನುಡಿದು ಗೋವರ್ಧನನ ಹಣೆಯನ್ನು ಹಿಡಿದು ನೋಡಿದಳು. "ಜ್ವರವೂ ಬಂದಿದೆ. ಶಶಿ ಡಾಕ್ಟರನ್ನು ಕರಸುತ್ತೇನೆ. ನನ್ನನ್ನು ಉಳಿಸಹೋಗಿ ನಿಮಗೀ ದುರ್ಭೋಗ!" ಎಂದಳು. ಈ ದುರ್ಭೋಗವೇ ತನಗೆ ಶ್ಲಾಘ್ಯಪುರಸ್ಕಾರವೆಂಬ ಕೃತಾರ್ಥತೆಯು ನಗು ಗೋವರ್ಧನನ ಮುಖದಲ್ಲಿ ಸೂಸಿತು.

"ಅವ್ವಾ!"

ಹಠಾತ್ ಕಿಡಿಕಿಯ ಹೊರಗಡೆ ಮರದಡಿಯಿಂದ ಆನಂದಧ್ವನಿ ಕೇಳಿಸಿತು. ಹೈಮವತಿ ದೃಷ್ಟಿಯನ್ನು ಆ ಕಡೆ ಹರಿಯಿಸಿದಳು. ಅನ್ನಪೂರ್ಣೆ

ಆಗಲೇ ಎದ್ದು ಬಂದು ಹೊಪಾರಿಸುತ್ತಿದ್ದಳು. ಒಳಗೆ ಹೈಮವತಿಯ ದನಿಯನ್ನು ಕೇಳಿ ಹಾಗೆ ಕೂಗಿದ್ದಳು. ಅವ್ವನೊಡನೆ ದೃಷ್ಟಾದೃಷ್ಟಿಯಾಗುತ್ತಲೆ ಅವಳು ಚೆಂದುಟಿಗಳಲ್ಲಿ ಬೆಳ್ನಗೆಯನ್ನು ಅರಳಿಸಿ ಆನಂದದ ನಿರ್ಝರಿಯನ್ನು ಹರಿಸಿದಳು.

ಹೈಮವತಿ ಅಕ್ಕರೆಯ ಮುನಿಸಿನಿಂದ ನುಡಿದಳು: "ಕಿಡಿಗೇಡಿ ಮಗು! ಬರಿಮೈಯಿಂದ ಮಂಜಿನಲ್ಲಿ ತಿರುಗುತ್ತಿದೆ! ನಾನು ಇದೀಗ ನೋಡಿ ಬಂದಿದ್ದೇನೆ- ಮಲಗಿ ನಿದ್ದೆ ಮಾಡುತ್ತಿತ್ತು! ಇಷ್ಟರಲ್ಲಿ ಯಾವಾಗ ಎದ್ದು ಬಂದೆಯೆ? ಒಳಗೊಂದೆ ಬಾ, ಹೇಳುತ್ತೇನೆ."

ಈ ಸ್ನೇಹಮಯವಾದ ತಿರಸ್ಕಾರದಲ್ಲಿ ಅನ್ನಪೂರ್ಣೆಗೆ ಏನೋ ಕೌತುಕದ ಅನುಭವವಾಗಿ ಅವಳು ಖಿಲಖಿಲನೆ ನಗತೊಡಗಿದಳು. ಇದರಿಂದ ಗೋವರ್ಧನನ ಹೃದಯವು ಆನಂದದ ಉದ್ವೇಗದಿಂದ ಭಗ್ನ ಅಸ್ಥಿಪಂಜರದಿಂದ ಹೊರ ಹೊರಡಲು ಹವಣಿಸತೊಡಗಿತು. ಅವನ ಪುಳಕವನ್ನು ಕಂಡು ಹೈಮವತಿ ಅಕಾರಣವಾಗಿಯೇ ಲಜ್ಜಿತಳಾಗಿ ಕೋಣೆಯಿಂದ ಹೊರಹೊರಡುತ್ತ "ಮಗುವನ್ನು ಹಿಡಿತರುತ್ತೇನೆ" ಎನ್ನುತ್ತ ಹೋದಳು.

ಹೈಮವತಿ ಹೋಗಿ ಅನ್ನಪೂರ್ಣೆಯನ್ನು ಎತ್ತಿಕೊಂಡು ಬಂದು, ಮೈ ತೊಳೆದು ಒಗೆದ ಅಂಗಿಯನ್ನು ತೊಡಿಸಿಕೊಂಡು, ಅವಳೊಂದಿಗೆ ಪುನಃ ಗೋವರ್ಧನನ ಕೋಣೆಗೆ ಬಂದಳು. "ಮಗು ಮತ್ತೆ ತಬ್ಬಲಿಯಾಗುವುದೆಂದು ಕಾಣುತ್ತದೆ" ಎಂದು ದುಃಖಮಂಬಿತ ನಗೆಯೊಡನೆ ಗೋವರ್ಧನನೆಂದ.

ದುಃಖದಿಂದ ಮ್ಲಾನವಾದ, ಲಜ್ಜೆಯಿಂದ ಉಜ್ವಲವಾದ ಮುಖದಿಂದ ಹೈಮವತಿ ಹೇಳಿದಳು: "ಅನುವನ್ನು ನನ್ನ ಹತ್ತಿರ ಬಿಟ್ಟುಹೋಗಿರಿ. ಅವಳು ಸುಖವಾಗಿ ಇರುವಳು"

"ಆದರೆ ನಾನು ಯಾರೊಡನಿರಲಿ ತಂಗೀ?" ಅದೇ ವ್ಯಥೆಯ ಸ್ವರದಲ್ಲಿ ಗೋವರ್ಧನನೆಂದ.

"ನೀವೂ ಇಲ್ಲಿಯೇ ಇದ್ದುಬಿಡಿರಲ್ಲ, ಆ ಬರಿದಾದ ಮನೆಯಲ್ಲಿ ಹೋಗಿ ಯಾವರೂ ಮಾಡುವುದೇನು?"

"ಕೊನೆಗೆ, ಇನ್ನು ಕೆಲದಿನಗಳಾದರೂ ಇಲ್ಲಿರುವಂತೆ ಮಾಡಿದ್ದಾಳೆ ಕಾಲೀಮಾತೆ!" ಗೋವರ್ಧನನು ನಗುನಗುತ್ತ ನುಡಿದ.

" ಕೆಲದಿನ ಅಷ್ಟೇ ಏನು ? ಚೆನ್ನಾಗಿ ಗುಣಹೊಂದುವ ತನಕ ಇಲ್ಲಿಂದ ಕದಲುವಂತಿಲ್ಲ. "

ಗೋವರ್ಧನನು ಹೈಮವತಿಯ ಈ ಮಾತಿಗೆ ಉತ್ತರವಾಗಿ ಕೃತಜ್ಞ ಕೃತಾರ್ಥತೆಯ ನಸುನಗೆ ನಕ್ಕ.

" ಶಶಿ ಡಾಕ್ಟರನ್ನು ಕರೆಕಳುಹುತ್ತೇನೆ" ಎಂದೆನ್ನುತ್ತ ಹೈಮವತಿ ಬಾಗಿಲ ಬಳಿ ಹೋದಳು. ಅಷ್ಟರಲ್ಲಿ ಅವಳ ತಂದೆ ಶಶಿ ಡಾಕ್ಟರೊಂದಿಗೆ ಬಂದೇ ಬಂದರು. ವಂಶಲೋಚನರೆಂದರು: " ಆಂ ! ಅಸ್ಥಿಪಂಜರದ ಒಂದೆರಡು ಮೂಳೆಗಳು ಮುರಿದಿವೆಯೆ? ಸರ್ವನಾಶ! ವಿಶೇಷ ವಿಪತ್ತಿನ ಭಯವಿಲ್ಲವಷ್ಟೆ? "

" ಇಲ್ಲ ಮಹಾಶಯ, ಕೆಲವು ದಿವಸ ಸ್ವಸ್ಥವಾಗಿ ಮಲಗಿದ್ದರೆ ಎಲ್ಲ ಸರಿಹೋಗುವುದು. " ಎಂದರು ಡಾಕ್ಟರು.

ವಂಶಲೋಚನರು ಕೋಣೆಯೊಳಗೆ ಪ್ರವೇಶಿಸುತ್ತಲೇ ಗೋವರ್ಧನನು ಸ್ವಾಗತಕ್ಕಾಗಿ ಏಳಲು ಹವಣಿಸಿದ. ಹೈಮವತಿ ವ್ಯಸ್ತಳಾಗಿ " ಏಳಬೇಡಿರಿ ನೀವು " ಎಂದಳು. ಡಾಕ್ಟರೂ ಎಚ್ಚರಿಸಿದರು: " ಹಾಂ ಹಾಂ, ಏನು ನಡೆಸಿದ್ದೀರಿ; ಏಳಕೂಡದು, ಜೋಕೆ ! " ಗೋವರ್ಧನನು ಲಜ್ಜಿತ ಸ್ಮಿತವದನದಿಂದ ಹಾಗೆಯೇ ಮಲಗಿಬಿಟ್ಟ.

ವಂಶಲೋಚನರು ನಕ್ಕು ನುಡಿದರು: " ಗೋವರ್ಧನ, ನೀನು ನಮ್ಮ ಹುಡುಗಿಯ ಮೇಲೆ ನಿನ್ನ ಮಯ್ಯೊತ್ತಿದೆ. ನಿನ್ನ ಪುಣ್ಯದಿಂದ ಮಾತೆ ನನ್ನ ಅಪರಾಧಗಳನ್ನು ಮನ್ನಿಸಿದಳು. ತಾಯಿಯನ್ನು ಈ ಸಲ ಎಷ್ಟು ನಗಿಸಿದ್ದೀ ನೀನು ! ಆವಳ ನಗೆಯಿಂದ ಚಂಡೀಮಂಟಪವೆಲ್ಲಾ ಬೆಳಗುತ್ತಿದೆ. ಬರುವ ಅಮಾವಾಸ್ಯೆಯ ಕಾಲೀಪೂಜೆ ಮಾಡಿದ ಬಳಿಕ ನಿನಗೆ ಬಿಡುವು. ಈ ತಿಂಗಳು ತಾಯ ಮಂದಿರದಲ್ಲಿ ನೀನು ಸೆರೆಯಾಳು ! "

" ಇಲ್ಲಿಯೇ ಇದ್ದುಬಿಡಿರೆಂದು ನಾನಂತೂ ಹೇಳಿದೆ. " ಎಂದು ನುಡಿದಳು ಹೈಮವತಿ.

" ಅದು ಉತ್ತಮ. ನಿನ್ನ ಮಗಳು ತನ್ನ ತಾಯಿಯ ಹತ್ತಿರ ಇರುವಳು ನೀನು ಇಲ್ಲಿಂದಲೇ ಎಲ್ಲಿ ಬೇಕಲ್ಲಿ ಹೋಗಿ ಆಡ್ಡಾಡಿಕೊಂಡು ಬರಬಹುದು. " ಎಂದರು ವಂಶಲೋಚನರು.

ಗೋವರ್ಧನನು ನೀರವವಾಗಿ ನಕ್ಕ ಅಷ್ಟೆ. ಡಾಕ್ಟರು ರೋಗಿಯ ಪರೀಕ್ಷೆಯಲ್ಲಿ ರತರಾದರು. ವಂಶಲೋಚನರು ಕೋಣೆಯಿಂದ ಹೊರಗೆ ಹೋಗುತ್ತ "ಇಲ್ಲಿ ಕೇಳು ಹಿಮೂ" ಎಂದರು. ಹೈಮವತಿಯೂ ತಂದೆಯನ್ನು ಹಿಂಬಾಲಿಸಿದಳು. ಮೆಟ್ಟಿಲನ್ನು ಇಳಿಯುತ್ತ್ತಿಳಿಯುತ್ತ ಅವರು ಹೇಳಿದರು: "ಗೋವರ್ಧನನು ತನ್ನ ಪ್ರಾಣದ ಪರಿವೆಯಿಲ್ಲದೆ ದೇವಿಯ ಪ್ರಕೋಪದಿಂದ ನಿನ್ನನ್ನು, ನನ್ನ ಸರ್ವಸ್ವವನ್ನು ಉಳಿಸಿದ್ದಾನೆ. ಅವನ ಸೇವಾಶುಶ್ರೂಷೆಯಲ್ಲಿ ಕೊರತೆಯಾಗಬಾರದು ಕಂಡೆಯಾ. ಆದರೆ ಅದೆಲ್ಲವೂ ನಿನ್ನೊಬ್ಬಳಿಂದ ನೀಗೀತೇ ? "

ಅವಳು ತಂದೆಯ ಹಿಂದುಗಡೆ, ಅವರ ದೃಷ್ಟಿಪಥದ ವಿಪರೀತ ದಿಕ್ಕಿನಲ್ಲಿದ್ದರೂ ಲಜ್ಜೆಯಿಂದ ಸಂಕುಚಿತಳಾದಳು. "ತರಲನಿಗೆ ಹೇಳಿದರಾಯಿತು." ಎಂದು ಸೂಚಿಸಿದಳು.

"ಹಾಂ ಹಾಂ, ಚೆನ್ನಾಗಿ ಹೇಳಿದೆ; ಅವನಿಗೆ ಹೇಳು."

ಹೈಮವತಿ ಆನಂದದಿಂದ ನಾಚಿಕೆಯ ಸಂಕೋಚದೊಡನೆ "ನೀವೇ ಹೇಳಿರಪ್ಪ; ನೀವು ಹೇಳಿದರೆ ಆತ ಒಲ್ಲೆನ್ನುವುದಿಲ್ಲ," ಎಂದಳು.

"ಹೌದು, ನನ್ನಲ್ಲಿ ಅವನಿಗೆ ಅಷ್ಟು ಭಕ್ತಿ, ಅಷ್ಟು ಶ್ರದ್ಧೆ ಇದೆ. ನನ್ನ ಮಾತನ್ನು ತೆಗೆದುಹಾಕುವುದಿಲ್ಲ. ಒಳ್ಳೇ ಉತ್ತಮ ಹುಡುಗ."

ಹೈಮವತಿಯ ಕಣ್ಣುಗಳೆರಡೂ ಮತ್ತೆ ನಾಚಿಕೆಯಿಂದ, ಕೌತುಕದಿಂದ ಚಂಚಲವಾದವು. ಮೋರೆ ಕೆಂಪಗಾಯಿತು. "ಅಪ್ಪಾ, ನಾನು ಹೋಗುತ್ತೇನೆ; ಅದೊ, ಶಶಿಕಾಕಾ ಬರುತ್ತಿದ್ದಾರೆ," ಎಂದಳು.

೫

ಹೈಮವತಿ ಪಲ್ಯ ಸೋಸುತ್ತಿದ್ದಳು. ಅನ್ನಪೂರ್ಣೆ ಪಲ್ಯದ ತುಂಬು-ತೊಗಟೆ ಜೋಡಣೆ ಮಾಡಿಕೊಂಡು ಅಡಿಗೆ ಹೂಡಿ ಆಡುತ್ತಿದ್ದಳು.

"ಅನ್ನೂ, ನಿನ್ನ ಅಡಿಗೆ ಆಯಿತೇ ಮಗೂ ?" ಹೈಮವತಿ ಪಲ್ಯ ಅರಿ-ಸುತ್ತ ಕೇಳಿದಳು.

ಅನ್ನಪೂರ್ಣೆ ಸಿಟ್ಟಿನಿಂದ ಹುಬ್ಬುಗಂಟಿಕ್ಕಿದಳು. "ಆಗಿಲ್ಲ ಅಂತೀನಿ

ಇನ್ನೂ. ಅಂದರೂ ನಿನ್ನ ಅವಸರವಪ್ಪಾ! ಇಷ್ಟು ಬೇಗನೆ ಎಂದಾದರೂ ಆಗುವುದೇ ಅಡಿಗೆ ? " ಎಂದಳು.

" ನನಗೆ ಬಹಳ ಹಸಿವೆ ಆಗಿದೆ ಅವ್ವಾ "

" ಈಗ ಆಗುತ್ತದೆ ಅಂತೀನಿ !"

" ಉಂ ಉಂ ಉಂ ! "

ಹೈಮವತಿ ಅಳುವನ್ನು ಅಭಿನಯಿಸಿದಳು ಮಕ್ಕಳಂತೆ. ಅದರಿಂದ ಬೇಸರ ಗೊಂಡ ಅನ್ನಪೂರ್ಣೆ " ಅಪ್ಪಾ, ಅಪ್ಪಾ, ಅಪ್ಪ ಮುದಿಗೂಸಾಗಿ ಅಳುತ್ತಾಳೆ ನೋಡು. ಒಂದು ಸ್ವಲ್ಪ ತಡೆ ನನ್ನ ಕೂಸೇ, ಈಗ ಅನ್ನ ಆಗುತ್ತದೆ, " ಎಂದು ನುಡಿದಳು.

ಆ ಹೊತ್ತಿಗೆ ತರಲನು ಬಂದು ಹಾಜರಾದ. ಹೈಮವತಿ ತನ್ನ ಭೂಮಿಕೆಯನ್ನು ಬಿಟ್ಟು " ತಂದೆ ಕಂಡಿದ್ದರೇ ? " ಎಂದು ತರಲನನ್ನು ಕೇಳಿ ದಳು

" ಹೂಂ, ಇನ್ನು ಬರೀ 'ಕಾಲೀ ಕೈವಲ್ಯದಾಯಿನಿ' ಯನ್ನು ಕೇಳುವು ದಕ್ಕಲ್ಲ ಬರುವುದು; ಗೋವರ್ಧನರ ಆಧ್ಯೆಕೆಗಾಗಿಯೂ ಬರಬೇಕೆಂದು ಅಪ್ಪಣೆ ಯಾಗಿದೆ."

ನಗೆಯನ್ನು ಅದುಮಿ ಹಿಡಿದು ಗಂಭೀರವಾಗಿ ಹೈಮವತಿಯೆಂದಳು: "ಇದರಿಂದ ನಿನಗೆ ಬಹಳ ತೊಂದರೆಯುಂಟಾಯಿತಲ್ಲ! ಏನು ಹೇಳಿದೆ ನೀನು?"

" ಮತ್ತೇನು ಹೇಳಲಿ? ತಮ್ಮ ಅಪ್ಪಣೆಯನ್ನು...."

"ಆಹಾ, ಬಲು ಕಷ್ಟದಿಂದ ಉಸಿರು ನುಂಗಬೇಕಾಯಿತೇನೊ! ಇಲ್ಲದಿ-ದ್ದರೆ ನಿನ್ನ ಇಚ್ಛೆಯೇನು ಇದ್ದಿಲ್ಲವೆಂದು ಕಾಣುತ್ತದೆ!"

ತರಲನ ಆಗಮನದಿಂದ ತನ್ನ ಆಟಕ್ಕೆ ತಡೆಯಾಯಿತೆಂದು ಅನ್ನಪೂರ್ಣೆ ವಿಷಣ್ಣೆಯಾದಳು. ಹೈಮವತಿಯ ಗಮನವನ್ನು ಮರಳಿ ತನ್ನ ಕಡೆಗೆ ಎಳೆ ಯುವುದಕ್ಕಾಗಿ, ತಟ್ಟೆಯೊಳಗೆ ಅನ್ನ ಪಲ್ಯ ಎಲ್ಲ ಬಡಿಸಿ ಕೂಗಿದಳು: "ಅಡಿಗೆ ಆಗಿದೆ, ತಟ್ಟೆ ಬಡಿಸಿದೆ, ಊಟಕ್ಕೆ ಬಾ. "

ಅವಳ ಕಡೆಗೆ ತಿರುಗಿ ನೋಡದೆಯೆ ಹೈಮವತಿ, "ಈಗಾಗಲೇ ಅಡಿಗೆ ಮಾಡಿಕೊಂಡು ಕೂತೆಯಾ ?" ಎಂದು ನುಡಿದು ತರಲನಿಗೆಂದಳು: "ಹಾಗಾ ದರೆ ಇಂದಿನಿಂದಲೇ ಸರತಿಯಿಂದ ರೋಗಿಯ ಶುಶ್ರೂಷೆ ಆರಂಭವಾಗಬೇಕು."

"ಸರತಿ ಮಾಡಿದರೆ ಓಡಿಯೇ ಹೋಗಬೇಕಾದೀತು. **ಸರತಿ ಗಿರತಿ** ಎಲ್ಲಾ ಸುಳ್ಳು—ಇಬ್ಬರೂ ಜೊತೆಯಲ್ಲಿಯೇ ಹಗಲು ರಾತ್ರಿ ರೋಗಿಯ ಸೇವೆ ಮಾಡಬೇಕು. ಇಲ್ಲದಿದ್ದರೆ ಖಂಡಿತ ಆಗಲಾರದ ಮಾತು." ತರಲನು ನಗುತ್ತ ನುಡಿದ.

"ಅವ್ವಾ, ಅನ್ನ ಆರಿ ಅಗ್ಗದವಾಯಿತು. ಲಗೂನೆ **ಊಟಕ್ಕೆ** ಬಾ." ಮತ್ತೆ ಕೂಗಿದಳು ಅನ್ನಪೂರ್ಣೆ.

ಹೈಮವತಿ ಅವಳ ಕಡೆ ಹೊರಳಿನೋಡಿ ಬೇಸರದಿಂದ "ಮಾತ-ನಾಡುತ್ತಿದ್ದೇನೆ, ಕಾಣುವುದಿಲ್ಲವೆ ?" ಎಂದು ಗದರಿ ಪುನಃ ತರಲನೊಡನೆ ಮಾತಿಗೆ ತೊಡಗಿದಳು. "ಆದರೆ ಅವರೇನೆಂದು ತಿಳಿದುಕೊಂಡಾರು ?"

"ತಿಳಿದುಕೊಳ್ಳಲಿ ಏನಾದರೂ. ಅವರ ಸೇವೆಯ ನೆವದಿಂದ ಹಗಲು ರಾತ್ರಿ ನಿನ್ನೊಂದಿಗೆ ಇರಲು ಸಿಕ್ಕುತ್ತದೆ; ಎಂದರೇ ಅವರ ಸೇವೆ ಆಗುವುದು. ಇಲ್ಲದಿದ್ದರೆ ಅವರಿಗಾಗಿ ಯಾರು ಸವೆದು ಸಣ್ಣಾಗುತ್ತಿದ್ದರು? ಅವರ ಆರೈಕೆ ಸರಿಯಾಗಿ ಆಗುತ್ತದೆ ಸಾಕು, ಮತ್ತೆ ಮನಸಿನಲ್ಲಿ ಇಲ್ಲದ್ದು ತಿಳಿದುಕೊಳ್ಳುವುದೇಕೆ ?"

ಹೈಮವತಿ ಕೌತುಕದಿಂದ ಖಿಲಖಿಲನೆ ನಕ್ಕಳು. "ಹಾಗಾದರೆ ನೀನು ಮನೆಗೆ ಊಟಕ್ಕೂ ಹೋಗುವುದು ಬೇಡ. ದಿನಾಲು ಎರಡು ಹೊತ್ತು ಇಲ್ಲಿಯೇ ಔತಣ." ಎಂದಳು.

"ಅಡಿಗೆ ಏನೇನು ಮಾಡುವೆ ?"

ಹೈಮವತಿ ಹುಸಿಮುನಿಸಿನಿಂದ ನಗೆಯನ್ನು ಮುಚ್ಚಲು ವ್ಯರ್ಥವಾಗಿ ಪ್ರಯತ್ನಪಡುತ್ತ ಹೇಳಿದಳು: "ಅನ್ನ-ಸಾರು-ಪಲ್ಯ!"

"ಇದೇನೇ! ಹಾಗಾದರೆ ಅನ್ನಪೂರ್ಣೆಯ ಅಡಿಗೆಯನ್ನೇ ಉಣ್ಣುತ್ತೇನೆ."

ತಾನು ಮಾಡಿದ ಅಡಿಗೆಯನ್ನೇ ತರಲನು ಉಣ್ಣಬೇಕೆಂದು ಮಾಡಿದ್ದಾನೆಂದು ತಿಳಿದು ಅನ್ನಪೂರ್ಣೆ ವಿರೋಧಿಸಿದಳು: "ಬೇಡ ಕಾಕಾ, ನಿನಗೆ ನಾನು ಊಟಕ್ಕೆ ಹಾಕುವುದಿಲ್ಲ; ನೀನು ಕೆಟ್ಟ ಇದ್ದೀ."

ಅನ್ನಪೂರ್ಣೆ ಕೋಪಗೊಂಡು ತನ್ನ ಕಲ್ಲು-ಮಣ್ಣಿನ ಅಡಿಗೆಯನ್ನೆಲ್ಲಾ

ಸೂರೆ ಮಾಡಿ, ತಂದೆಯ ಹತ್ತಿರ ದೂರಿಕೊಳ್ಳಲು ಓಡಿ ಹೋದಳು. ತರಲ ಹೈಮವತಿ ಇಬ್ಬರೂ ಸಕ್ಕರು. ಆದರಿಂದ ಅವಳಿಗೆ ಇನ್ನಷ್ಟು ಸಿಟ್ಟು ಹೆಚ್ಚಿತು. ತಂದೆಯ ಬಳಿಗೆ ಹೋಗಿ ಅವಳು ದೂರಿದಳು: " ನೋಡಪ್ಪಾ, ನಾನು ಅವ್ವನಿಗೆಂತ ಅಡಿಗೆ ಮಾಡಿದ್ದೇನೆ, ಕಾಕಾ ಬಂದಿದ್ದಾನೆ ಉಣ್ಣುತ್ತೇನೆ ಅಂತ! ನಾನೇಕೆ ಹಾಕಲಿ ?"

ಗೋವರ್ಧನನು ನಕ್ಕು ಮಗಳನ್ನು ಸಂತಯಿಸಿದ. " ನೀನು ಅನ್ನ-ಪೂರ್ಣೆ ಮಗೂ, ಎಲ್ಲರಿಗೂ ಊಟಕ್ಕೆ ಹಾಕಬೇಕು, " ಎಂದು ಹೇಳಿದ.

ಇದರಿಂದ ಅನ್ನಪೂರ್ಣೆಯ ಅಸಮಾಧಾನ ತಗ್ಗಲಿಲ್ಲ, ಹೆಚ್ಚಿತು. "ಬೇಡ ಹೋಗು! ಆಂ ಆಂ!" ಎಂದು ಅವಳು ಅಳತೊಡಗಿದಳು. ತರಲನ ಕಡೆಗೆ ಆಕರ್ಷಿತಳಾಗಿ ಹೈಮವತಿ ತನ್ನನ್ನು ಉಪೇಕ್ಷಿಸಿದುದರಿಂದ ಅವಳ ಮನಸು ಖಿನ್ನವಾಗಿತ್ತು. ಅದಕ್ಕೇ ತರಲನ ಬಗೆಗೆ ಅವಳಿಗೆ ತಿರಸ್ಕಾರ. ಆದರೆ ಮಗಳ ಕೋಪದ ದೂರಿನ ಅರ್ಥ ಗೋವರ್ಧನನಿಗೆ ತಿಳಿಯಲಿಲ್ಲ. ಅವಳನ್ನು ರಮಿಸಲೆಂದು " ಬಿಡು ಬಿಡು, ನಿಮ್ಮ ಕಾಕಾ ಬಹಳ ಕೆಟ್ಟ. ಆತನಿಗೆ ಊಟಕ್ಕೆ ಹಾಕಬೇಡ. ನಿಮ್ಮ ಅವ್ವನಿಗೆ ಹಾಕುವೆಯಷ್ಟೆ?" ಎಂದ.

"ಒಲ್ಲೆ ಹೋಗು!" ಅಳುತ್ತಳುತ್ತಲೆ ಅನ್ನಪೂರ್ಣೆಯೆಂದಳು.

ಹಾಸಿಗೆ ಬಿಟ್ಟೇಳಲಾರದೆ, ಮಲಗಿದಲ್ಲಿಯೇ ಮಗಳನ್ನು ಸಮಾಧಾನಪಡಿಸುವುದಕ್ಕೆ ಉಪಾಯವನ್ನು ಕಾಣದೆ ಗೋವರ್ಧನನು ಅತ್ಯಂತ ಚಂಚಲನಾದ.

ಅನ್ನಪೂರ್ಣೆಯ ಅಳುವನ್ನು ಕೇಳಿ ತರಲನು ನಗುತ್ತ ನುಡಿದ: " ಆಗೋ, ನಿನ್ನ ಮಗಳ ಬಜಂತ್ರಿ ಆರಂಭವಾಗಿದೆ ! "

ಅನುವಿನ ದನಿಯನ್ನು ಕೇಳಿದೊಡನೆ ಹೈಮವತಿಯ ಮನಸು ಆ ಕಡೆ ಹೋಗಲು ಹಾತೊರೆಯುತ್ತಿತ್ತು. ತರಲನ ಚೇಷ್ಟೆಯಿಂದ ತನ್ನ ಮನೋಭಾವವು ಅವನಿಗೆ ಗೊತ್ತಾಯಿತೆಂದು ಬಗೆದು ಅವಳು ಅಪ್ರತಿಭಳಾದಳು. " ಹೋಗಿ ನೋಡುತ್ತೇನೆ, ಜಡ್ಡಿನವರಿಗೆ ತ್ರಾಸ ಕೊಡುತ್ತಿದೆಯೋನೋ " ಎಂದಳು.

ಹೈಮವತಿ ಕೋಣೆಯೊಳಗೆ ಪ್ರವೇಶಿಸುತ್ತಲೆ ಗೋವರ್ಧನನು ಅತ್ತ ಕಡೆಗೆ ಹೊರಳಿ ನೋಡಿದ. ಅವನ ಕಣ್ಣುಗಳು ಒದ್ದೆಯಾಗಿ ಹೊಳೆಯುತ್ತಿದ್ದವು.

ಅವಳು ಸರಕ್ಕನೆ ಅನ್ನಪೂರ್ಣೆಯನ್ನು ಎತ್ತಿಕೊಂಡವಳೇ ಅಲ್ಲಿಂದ ಹೊರ ಬಿದ್ದಳು. ಆ ಮೇಲೆ ಅಂಗಳದಲ್ಲಿ ಪಾರಿವಾಳಗಳನ್ನು ಹಿಡಿಯಲು ಅತ್ತಿಂದಿತ್ತ ಓಡಾಡುತ್ತ ಅವಳು ಮಗುವಿನ ಸಿಟ್ಟನ್ನು ಮರೆಯಿಸಲು ಪ್ರಯತ್ನಿಸತೊಡಗಿದಳು. ಕೊಂಚ ಹೊತ್ತಿನಲ್ಲಿಯೇ ಪಾರಿವಾಳಗಳ ರೆಕ್ಕೆಗಳ ಪಟಪಟ ಸಪ್ಪಳ ನೊಡನೆ, ಅನ್ನಪೂರ್ಣೆಯ ತಪತಪ ಚಪ್ಪಾಳೆಯ ಸದ್ದು ಮತ್ತು ಕಿಲಕಿಲ ಕುಲುಕುಲು ನಗೆ ಬೆರೆತು ಮನೆ ಪ್ರತಿಧ್ವನಿತವಾಯಿತು. ಆ ಆನಂದದ ಕಲರವ ವನ್ನು ಕೇಳಿ ಗೋವರ್ಧನನ ಕಣ್ಣು ಹಸಿಯಾಗಿ, ಮುಖಕ್ಕೆ ನಗೆಯ ಕಳೆ ಏರಿತು.

೬

ಇಳಿಹೊತ್ತಿನಲ್ಲಿ ತರಲ ಹೈಮವತಿ ಗೋವರ್ಧನನ ಕೋಣೆಯೊಳಗೆ ಕುಳಿತು ಮಾತನಾಡುತ್ತಿದ್ದರು. ತರಲನ ಸಣ್ಣಪುಟ್ಟ ಮಾತಿಗೂ ಹೈಮವತಿಯ ಮುಖ ಕ್ಷಣಕ್ಷಣಕ್ಕೆ ಆನಂದದಿಂದ ಉಜ್ವಲವಾಗುತ್ತಲಿದ್ದಿತು. ಅದನ್ನು ನೋಡಿ ನೋಡಿ ಗೋವರ್ಧನನ ಕಣ್ಣುಗಳು ಮುಗ್ಧವಾಗುತ್ತಿದ್ದವು, ಮೋರೆ ಸಂತಸದಿಂದ ಅರಳುತ್ತಿದ್ದಿತು. ಅಪ್ಪನು ಮತ್ತೊಬ್ಬರೊಡನೆ ಮಾತಿನಲ್ಲಿ ಮೈ ಮರೆತಿರುವುದನ್ನು ಕಂಡು ಅನ್ನಪೂರ್ಣೆ ಬೆಕ್ಕಿನ ಮರಿಯೊಂದನ್ನು ತೊಡೆಯ ಮೇಲಿಟ್ಟುಕೊಂಡು ಮೂಲೆಯೊಳಗೆ ಸುಮ್ಮನೆ ಕುಳಿತಿದ್ದಳು.

ವಂಶಲೋಚನರು ಆ ಕಡೆ ಬರುತ್ತಿರುವುದನ್ನು ಕಂಡು ತರಲನು ಮೇಲಕ್ಕೆದ್ದು ಹೈಮವತಿಯಿಂದ ತುಸ ದೂರಸರಿದು ನಿಂತುಕೊಂಡ. ಹೈಮವತಿ ಗೋವರ್ಧನನಿಗೆ ಬಾಯೊಳಗೆ ಹಾಕಿಕೊಳ್ಳಲು ಬತ್ತಾಸು ಕೊಡುವುದಕ್ಕೆ ಹೋದಳು. ಆಗ ಗೋವರ್ಧನನು ನಕ್ಕು ನುಡಿದ: “ ಈಗ ಏನೂ ಬೇಡ ತಂಗೀ. ಸಂಜೆಯೇ ಆಗುತ್ತ ಬಂತು. ಒಮ್ಮೆಲೇ ಸಂಜೆಯಾದಬಳಿಕ ಏನಾದರೂ ತೆಗೆದುಕೊಳ್ಳುತ್ತೇನೆ. ”

ಹೈಮವತಿ ಬತ್ತಾಸುಗಳನ್ನು ತಿರುಗಿ ತಟ್ಟೆಯಲ್ಲಿಟ್ಟಳು. ಮೂಲೆಯಲ್ಲಿ ಕುಳಿತಿದ್ದ ಅನ್ನಪೂರ್ಣೆ ತನ್ನ ಬೆಕ್ಕಿನ ಮರಿಯನ್ನು ಕುರಿತು ಹೇಳಿದಳು: “ ಆ ಬತ್ತಾಸು ನನ್ನವಾಗಿದ್ದರೆ ಒಬ್ಬಳೇ ಎಂದೂ ತಿನ್ನುತ್ತಿದ್ದಿಲ್ಲ. ಎಲ್ಲರನ್ನೂ ಕರೆದು ಕೊಡುತ್ತಿದ್ದೆ. ”

ತರಲನು ಹೋ ಹೋ ಎಂದು ನಕ್ಕ. ಹೈಮವತಿ ತನ್ನ ನಗೆಯನ್ನು ತಡೆಹಿಡಿದು "ಅನ್ನೂ, ನಿನಗೊಂದು ಬತ್ತಾಸು ಬೇಕೇನಮ್ಮಾ? ತಗೋ" ಎಂದು ಬತ್ತಾಸನ್ನು ಅನ್ನಪೂರ್ಣೆಯ ಮುಂದೆ ಹಿಡಿದಳು.

ತರಲನ ಹಾಸ್ಯದಿಂದ ಕುಪಿತಳಾದ ಅನ್ನಪೂರ್ಣೆ ಅವನನ್ನು ಕಡೆಗಣ್ಣಿನಿಂದ ನೋಡುತ್ತ ತಲೆಯಲ್ಲಾಡಿಸಿ ಒಲ್ಲೆನೆಂದು ಸೂಚಿಸಿದಳು. ಹೈಮವತಿ ಅವಳ ಗಲ್ಲ ಹಿಡಿದು ರಮಿಸುತ್ತ ಬತ್ತಾಸನ್ನು ಅವಳ ಬಾಯೊಳಗಿಟ್ಟಳು. ಆದರೂ ಅನ್ನಪೂರ್ಣೆಯ ಅಭಿಮಾನ ದುಮ್ಮಾನ ದೂರಾಗಲಿಲ್ಲ. ಅವಳ ಹಲ್ಲುಗಳು ಸಿಹಿಬಿಲ್ಲೆಯನ್ನು ಕಡಿಯಲು ಉತ್ಸುಕವಾಗಿದ್ದವು, ನಾಲಗೆಯಲ್ಲಿ ನೀರು ಬಿಡುತ್ತಿದ್ದಿತು. ಆದರೂ ಅವಳು ಮತ್ತೆಮತ್ತೆ ತರಲನನ್ನೇ ಕಡೆಗಣ್ಣಿನಿಂದ ನೋಡತೊಡಗಿದಳು.

"ಹೇಗಿದ್ದೀ ಗೋವರ್ಧನ?" ವಂಶಲೋಚನರು ಬಂದು ವಿಚಾರಿಸಿದರು.

ಮಗಳು ಮತ್ತು ಹೈಮವತಿಯರ ಸ್ನೇಹಲೀಲೆಯಿಂದ ಹರ್ಷಿತನಾದ ಗೋವರ್ಧನನು ಅವರ ಕಡೆಗೆ ಮುಖ ತಿರುಗಿಸಿ, "ಚೆನ್ನಾಗಿದ್ದೇನೆ ತಾತಾ; ಜಗದಂಬೆಯ ರಾಜ್ಯದಲ್ಲಿ ಅಕ್ಷೇಮಕ್ಕೆ ಅವಕಾಶವುಂಟೆ?" ಎಂದು ನಗುತ್ತ ಉತ್ತರವಿತ್ತ.

ಗೋವರ್ಧನನ ತಲೆಯ ಮೇಲೆ ಕೈಯನ್ನಿಟ್ಟು ಹರ್ಷಗದ್ಗದ ಸ್ವರದಿಂದ ವಂಶಲೋಚನರು ಮಾತನಾಡಿದರು: "ಏನು ಮುತ್ತಿನಂತಹ ಮಾತು! ವಿಶ್ವಭುವನವು ಮಾತೆಯ ಮಡಿಲೆಂಬುದನ್ನು ಮರೆತಾಗ ನಾವು ದುಃಖವನ್ನು ಭೋಗಿಸುವೆವು. ಜಗತ್ತಿನೊಳಗೆ ಸುಖದೊಂದಿಗೆ ದುಃಖವೂ ಆನಂದದೊಂದಿಗೆ ವೇದನೆಯೂ ಎಷ್ಟೋ ಇದ್ದೇ ಇರುವುದು ಅವನ್ನು ನಿನ್ನ ಹಾಗೆ ಎಲ್ಲರೂ ಹಸನ್ಮುಖದಿಂದ ಸಹಿಸುತ್ತಿದ್ದರೆ! ಮಾತೆಯ ವಿಶೇಷ ಕೃಪೆಯಿಲ್ಲದೆ ಇಂತಹ ಶಕ್ತಿ ಮನುಷ್ಯನಿಗೆ ಪ್ರಾಪ್ತವಾಗುವುದಿಲ್ಲ. ತಾಯಿ ಕೃಪಾಮಯೀ! ತಾಯಿ ಜಗದಂಬೆ!"

ಸುಮ್ಮನೆ ಏನೋ ಒಂದು ಮಾತನಾಡಿದುದನ್ನು ಹಿಡಿದು, ವಂಶಲೋಚನರ ವ್ಯಥಿತ ಅಂತಃಕರಣದ ಉಚ್ಛ್ವಾಸವು ಉಕ್ಕುತ್ತಿರುವುದನ್ನು ಕಂಡು ಗೋವರ್ಧನನು ಲಜ್ಜಿತನಾದ. ಮಾತಿನ ದಿಕ್ಕನ್ನು ಬದಲಿಸುವುದಕ್ಕಾಗಿ

ಅವನು ನಡುವೆಯೇ ಮಾತನಾಡಿದ: "'ಕಾಲೀ ಕ್ವೆಸ್ಚನ್ ಪಾಯಿಂಟ್' ಯನ್ನು ಮುಂದೆ ಬರೆದಾಗಿದೆಯೆ? ರಾತ್ರಿ ಅದನ್ನು ಒಪ್ಪಿಯೇ ಓದಿಸಿರಾದೀತು."

"ಒಳ್ಳೇದು, ಹಾಗೆಯೇ ಆಗಲಿ. ನಾನು ಸಂಧ್ಯಾಹ್ನಿಕ ಮುಗಿಸಿಕೊಂಡು ಬರುತ್ತೇನೆ. ತಮ್ಮಾ ತರಲಾ, ಆಗ ನಿನಗೂ ಇರಲಿಕ್ಕೆ ಸಾಧ್ಯವೇ?"

ತರಲನು ಪಕ್ಕನೆ ಒಂದು ಬಾರಿ ಹೈಮವತಿಯ ಕಡೆ ನೋಡಿ, ಗಾಂಭೀರ್ಯವನ್ನು ತಂದುಕೊಳ್ಳಲು ಯತ್ನಿಸುತ್ತ ಹೇಳಿದ: "ನಾನು ರಾತ್ರಿ ಇಲ್ಲಿಯೇ ಇರಬೇಕಾಗುತ್ತದೆ. ಅಕ್ಕನನ್ನು ಒಬ್ಬಳನ್ನೇ ಬಿಟ್ಟು ಹೋಗಲಿಕ್ಕಾಗುವುದಿಲ್ಲ."

"ಬೇಡ ಬೇಡ. ನಿಮಗೆ ಈಗಾಗಲೇ ಕಷ್ಟ ಸಾಕಷ್ಟಾಗಿದೆ. ರಾತ್ರಿ ಇರಬೇಕಾದ ಅಗತ್ಯವೇನಿಲ್ಲ." ಗೋವರ್ಧನನು ಪ್ರಸನ್ನನಾಗಿ ನುಡಿದ.

"ಸತ್ಕಾರ್ಯ ಮಾಡುವುದಕ್ಕೆ ಯಾರನ್ನೂ ತಡೆಯುವುದು ಉಚಿತವಲ್ಲ ಗೋವರ್ಧನ. ನಮ್ಮ ತರಲ ಉತ್ತಮ ಹುಡುಗ. ಅವನಿಗೆ ಧರ್ಮದಲ್ಲಿ ವಿಪರೀತ ಆಸಕ್ತಿ. ನಿನ್ನ ಆರೋಗ್ಯವನ್ನು ನೋಡಿ ಬಹಳ ಆನಂದವಾಗುವುದು ತಮ್ಮಾ. ತಾಯಿ ಕಾಳಿ ನಿನಗೆ ಕಲ್ಯಾಣ ಮಾಡಲಿ. ಹೋಗಿ ನಾನು ಆಹ್ನಿಕ ತೀರಿಸಿಕೊಂಡು ಬರುತ್ತೇನೆ." ಎಂದರು ಪಂಚಲೋಚನರು.

ಅವರು ಹೋದ ಬಳಿಕ ತರಲ ಹೈಮವತಿಯರು ಒಬ್ಬರ ಮುಖವನ್ನೊಬ್ಬರು ನೋಡಿ ನಕ್ಕರು. ಅವರ ಕಡೆ ನೋಡಿ ಗೋವರ್ಧನನೂ ನಕ್ಕ.

"ಹೋಗಿ ದೀಪ ಹಚ್ಚುತ್ತೇನೆ." ಹೈಮವತಿ ಲಜ್ಜಿತೆಯಾಗಿ ನುಡಿದಳು.

ತರಲನೂ ಲಜ್ಜಿತನಾಗಿ ಸರಕ್ಕನೆ ತಿರುಗಿ "ಕೋಣೆಯೊಳಗೆ ತಂಡಿ ಬರುತ್ತಿದೆ; ಕಿಡಿಕಿಯನ್ನು ಮುಚ್ಚುತ್ತೇನೆ," ಎಂದ.

ಕೋಣೆಯೊಳಗೆ ಇದ್ದವರೆಲ್ಲರೂ ಅನ್ಯಮನಸ್ಕರಾಗಿ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದರು. ಆಗ ಅನ್ನಪೂರ್ಣ ಕಪುರ್ ಕುಪುರ್ ಎಂದು ಬತ್ತಾಸನ್ನು ತಿನ್ನಲಾರಂಭಿಸಿದಳು. ಅವಳ ತೊಡೆಯ ಮೇಲಿನ ಬೆಕ್ಕಿನ ಮರಿ ಅವಳ ಬಾಯಿಯ ಕಡೆ ನೋಡುತ್ತ ಮ್ಯಾವ್ ಮ್ಯಾಂವ್ ಎಂದು ತನ್ನ ಹಸಿವನ್ನು ನಿವೇದಿಸುತ್ತಲಿತ್ತು.

೭

ಗೋವರ್ಧನನ ಆರೈಕೆಗಾಗಿ ತರಲನು ಹಗಲೂ ರಾತ್ರಿ ಪಂಚಲೋಚನರ ಮನೆಯಲ್ಲಿಯೇ ಇರುತ್ತಾನೆ. ಆದರೆ ಜಡ್ಡಿನವನ ಸೇವೆಗಿಂತಲೂ ಹೈಮ

ವತಿಯ ಸಾನ್ನಿಧ್ಯವೇ ಅವನನ್ನು ಹೆಚ್ಚಾಗಿ ಸೆಳೆಯುತ್ತಿದೆ ಎಂಬುದನ್ನು ಗೋವರ್ಧನನು ಕಿಂಚಿತ್ ಅನುಮಾನಿಸಿದ್ದಾನೆ. ಆ ಬಗೆಗೆ ಹೆಚ್ಚಿಗೆ ಅನುಭವವಾದುದು ಅನ್ನಪೂರ್ಣೆಗೆ. ತನ್ನ ತಾಯಿಗೆ ತನಗಿಂತಲೂ ಕಕ್ಕನ ಮೇಲೆಯೇ ಬಹಳ ಪ್ರೀತಿಯೆಂದು ಅಡಿಗಡಿಗೆ ಅವಳಿಗೆನಿಸುತ್ತಿತ್ತು. ಆದರಿಂದ ಅವಳಲ್ಲಿ ಕೋಪವೂ ವಿರಸವೂ ಉಂಟಾಗಿ ಒಳಗೊಳಗೆ ಕೊರೆಯುತ್ತಿದ್ದವು.

ಗೋವರ್ಧನನಿಗೆ ಪಥ್ಯವನ್ನು ಕೊಟ್ಟು ತರಲನು ಊಟಕ್ಕೆ ಹೋಗುತ್ತಿದ್ದ. ಆಗ, ಊಟಕ್ಕೆ ಇಷ್ಟು ಸಮಯ ಬಹಳ ಹೆಚ್ಚೆಂದು ಗೋವರ್ಧನನಿಗೆ ಎನಿಸುತ್ತಿತ್ತು. ಆದರೂ ಒಬ್ಬನೇ ಹಾಸಿಗೆಯಲ್ಲಿ ಬಿದ್ದುಕೊಂಡು ಜನರ ದಾರಿ ಕಾಯುತ್ತಿದ್ದುದರಿಂದ ನಿಮಿಷ ಗಂಟೆಯಾಗಿ ಕಾಣುತ್ತಿರಬಹುದೆಂದು ಎಂದುಕೊಳ್ಳುತ್ತಿದ್ದ. ರಾತ್ರಿ ಊಟವಾದ ಬಳಿಕ ಹೈಮವತಿ ಬಹಳ ಹೊತ್ತು ಗೋವರ್ಧನನ ಕೋಣೆಯಲ್ಲಿ ಕುಳಿತು ಕಥೆ ವಿನೋದಗಳಿಂದ ವಾತಾವರಣವನ್ನು ಉಲ್ಲಾಸದಿಂದ ತುಂಬುತ್ತಿದ್ದಳು. ಆ ಕಥೆ ವಿನೋದಗಳಲ್ಲಿ ಜೊತೆಗಾರ ಪಾಲುಗಾರ ಹೆಚ್ಚಾಗಿ ತರಲನೇ. ಗೋವರ್ಧನನು ಒಂದು ರೀತಿ ನೀರವವಾಗಿಯೇ ಇದ್ದು, ಹೈಮವತಿಯ ನಲವಿನಿಂದ ಅರಳಿ ಕಂಗೊಳಿಸುವ ಮುಖಶ್ರೀಯನ್ನೇ ನೋಡುತ್ತಿರುವುದು ರೂಢಿಯಾಗಿತ್ತು. ಒಮ್ಮೆಲೆ ಬಿರುಗಾಳಿ ಬೀಸಿ ದೀವಿಗೆ ನಂದಿ ಕೋಣೆಯೆಲ್ಲ ಕತ್ತಲೆ ಕವಿದ ಹಾಗೆ, ಹೈಮವತಿ ಹೊರಟುಹೋದಳೆಂದರೆ ಕೋಣೆ ನಿರಾನಂದವಾಗುತ್ತಿದ್ದಿತು.

ಆ ಕಡೆ ಮಗ್ಗುಲಾಗಿ ಮಲಗಬೇಕೆಂಬ ಇಚ್ಛೆಯಿದ್ದರೂ ಆಗಲಾರದೆ ಗೋವರ್ಧನನು ತರಲನಿಗೆನ್ನುವ: "ಮಲಗಿಕೊಳ್ಳಿರಿನ್ನು ತರಲ ಬಾಬೂ, ರಾತ್ರಿ ಬಹಳವಾಗಿದೆ. ನನಗಾಗಿ ಹಗಲೆಲ್ಲ ದುಡಿದು, ಮತ್ತೆ ರಾತ್ರಿಯಲ್ಲಿಯೂ ಜಾಗರಣೆ ಮಾಡಿದರೆ ನಿಮಗೂ ಜಡ್ಡಾದೀತು ಎಲ್ಲಿಯಾದರೂ."

ಅದಕ್ಕೆ ತರಲನೆನ್ನುವ: "ಛೆ ಛೆ, ನಾವು ನಿಮಗೇನು ಮಾಡುತ್ತೇವೆ? ಒಬ್ಬರೇ ಇರುತ್ತೀರಿ, ಅದಕ್ಕೆ ಎರಡು ಗಳಿಗೆ ಎಲ್ಲರೂ ಕುಳಿತುಕೊಂಡು ಮಾತಾಡಿ ಹೊತ್ತುಗಳೆಯುವುದು, ಅಷ್ಟೆ. ಈಗಾದರೂ ಅಷ್ಟೆಲ್ಲಿ ರಾತ್ರಿಯಾಗಿದೆ? ಹೋಗಿ ಸ್ವಲ್ಪ ರಸ ಕುಡಿದು ಬರುತ್ತೇನೆ. ಈ ಕೆರೆಯ ದಂಡೆಯ ಮೇಲಿನ ಸಣ್ಣ ಗಿಡದ ರಸ ಬಲು ಸವಿ ಭಾಸ್ಕರಮಹಾಶಯ. ನೀವು ಕುಡಿಯುವಂತಿಲ್ಲ; ಇಲ್ಲದಿದ್ದರೆ ನಿಮಗೂ ತಂದು ಕೊಡುತ್ತಿದ್ದೆ."

ದಿನಾಲು ರಾತ್ರಿ ರಸ ತೆಗೆದುಕೊಳ್ಳುವುದು ತರಲನಿಗೆ ಅಭ್ಯಾಸವಾಗಿದ್ದಿತು. ಗೋವರ್ಧನನು ನಗೆಯನ್ನು ಬೀರಿ ನುಡಿಯುವ: "ನಿಮ್ಮ ವ್ಯಸನ ವೇನೂ ಕೆಟ್ಟದಲ್ಲ. ನಾವೂ ಸಣ್ಣವರಿದ್ದಾಗ ಹೀಗೆಯೇ ಮಾಡುತ್ತಿದ್ದವು. ರಾತ್ರಿ ಕಾಲದ ರಸದ ರುಚಿಯೇ ಹಿರಿದು."

ತರಲನು ರಸವನ್ನು ಸೇವಿಸಿ ಮರಳಿದಾಗ ಬಹುಶಃ ಗೋವರ್ಧನನಿಗೆ ನಿದ್ದೆ ಹಿಡಿದಿರುವುದು. ವಂಶಲೋಚನರು ಇನ್ನೂ ಕಾಲೀಗೃಹದಲ್ಲಿ ಜಪ ಮಾಡುತ್ತ ಕುಳಿತಿರುವರು.

ಒಂದು ದಿನ ಹೈಮವತಿ ನಿತ್ಯನಿಯಮದಂತೆ ಬೆಳಗಿನಲ್ಲಿ ಜಳಕಮಾಡಿ ತಿರುಗಿ ಬಂದು ನೋಡಿದಳು—ಅನ್ನಪೂರ್ಣೆ ಆಗಲೇ ಎಚ್ಚತ್ತಿದ್ದಳು. ಆದರೆ ಅವ್ವನು ತನ್ನನ್ನು ಕರೆದೆತ್ತಿಕೊಳ್ಳಲೆಂಬ ಅಭಿಲಾಷೆಯಿಂದ ಸುಮ್ಮನೆ ಮಲಗಿದ್ದಳು. ಅವ್ವನು ಬಂದಳೆಂಬುದು ಗೊತ್ತಾಗಲು ಕಣ್ಣು ಮುಚ್ಚಿ ನಿದ್ದೆಯ ಸೋಗು ಹಾಕಿದಳು.

ಹೈಮವತಿ ಅಕ್ಕರೆಯಿಂದ ನಗುತ್ತ ನುಡಿದಳು: "ಮಗೂ ಅನೂ, ಎದ್ದಿದ್ದೀಯಾ? ಎದ್ದು ಬಾ ನನ್ನ ಚಿನ್ನ. ನಾನೀಗ ಹಾಸಿಗೆಯನ್ನು ಮುಟ್ಟುವ ಹಾಗಿಲ್ಲ"

ಹೊದ್ದುಕೊಂಡುದನ್ನು ಕಾಲಿನಿಂದೊದೆದು ನಗುತ್ತ ಎದ್ದು ಬಂದಳು ಅನ್ನಪೂರ್ಣೆ. ಹೈಮವತಿ ಅವಳನ್ನೆತ್ತಿಕೊಂಡು ಬಚ್ಚಲುಮನೆಗೆ ಕರೆದೊಯ್ದು ಮುಖ ತೊಳೆದು ಹೇಳಿದಳು: "ಹೋಗು, ಅಪ್ಪ ಎದ್ದಿದ್ದಾರೇನೋ ನೋಡಿ ಬಾ. ಅಷ್ಟರಲ್ಲಿ ನಿನಗೆ ತಿಂಡಿಯನ್ನು ತೆಗೆದಿಡುತ್ತೇನೆ."

"ಕಾಲು ಬಹಳ ಹರಿಯುತ್ತವೆ ಅವ್ವ, ಹೋಗಲಾರೆ" ಎಂದಳು ಅನ್ನ-ಪೂರ್ಣೆ ಕಾತರದ ದನಿಯಲ್ಲಿ.

ಎತ್ತಿಕೊಳ್ಳಲೆಂಬುದಕ್ಕೆ ಕಳ್ಳಸೋಗಿದು ಎಂದು ಹೈಮವತಿ ಅರಿತಳು. ನಗುತ್ತ ಅವಳೆಂದಳು: "ಹಾಗಾದರೆ ಬಾ, ನಾನು ಎತ್ತಿಕೊಂಡು ಹೋಗುತ್ತೇನೆ."

ಅವಳು ಮಗುವನ್ನೆತ್ತಿಕೊಳ್ಳಲು ಬಾಗಿದಳು. ಬಾಗಿಲಲ್ಲಿ ಕಾಲ ಸದ್ದಾಯಿತು. ತಿರುಗಿ ನೋಡಿದಳು. ತರಲ. ಹೈಮವತಿ ಅನ್ನಪೂರ್ಣೆ

ಯನ್ನು ಕೈಬಿಟ್ಟು ಪೂರಾ ಮರೆತೇ ಎದ್ದು ನಿಂತಳು. ಈ ದಿನದ ತರಲ ಹೈಮವತಿಯರ ಮಿಲನದಲ್ಲಿ ಆನಂದದ ಹಾಸ್ಯವಿರಲಿಲ್ಲ.

“ ಮಾಮಾನಿಗೆ ಹೇಳೋಕ್ಕೆ ಹೋಗುತ್ತೇನೆ” ತರಲನು ಹತಾಶಕಾತರನಾಗಿ ಉದ್ವೇಗದ ಧ್ವನಿಯೊಡನೆ ಹೇಳಿದ.

ಹೈಮವತಿಯ ಮೋರೆ ಭಯದಿಂದ ಕಪ್ಪಾಯಿತು. ಅವಳು ಬಿಟ್ಟ ಕಣ್ಣುಗಳಿಂದ ನಿರವವಾಗಿ ತರಲನನ್ನು ನೋಡತೊಡಗಿದಳು. ಅವನು ಇನ್ನೇನನ್ನೂ ಮಾತನಾಡದೆ ಭಾರವಾದ ಕಾಲುಗಳನ್ನು ಎಳೆದೆಳೆದಿಡುತ್ತ ಮೆಲ್ಲ ಮೆಲ್ಲನೆ ಹೊರಟುಹೋದ. ಹೈಮವತಿ ಕೊಂಚಹೊತ್ತು ಸ್ತಬ್ಧಳಾಗಿ ನಿಂತಿದ್ದು, ಯಾರಿಗಾದರೂ ಸಂಕಟವೊಂದು ಸಂಭವಿಸಿದ ಸಮಯದಲ್ಲಿ ಧಾವಿಸಿ ಹೋಗುವ ರೀತಿಯಲ್ಲಿ ಪ್ರಸ್ತಕಾಗಿ ಅಣ್ಣನ ಹಿಂದೆ ತೆರಳಿದಳು. ಅಲ್ಲಿ ಅನ್ನಪೂರ್ಣೆಯೊಬ್ಬಳೇ ಉಳಿದಳೆಂಬ ಅರಿವೇ ಅವಳಿಗಿರಲಿಲ್ಲ. ಅನ್ನಪೂರ್ಣೆಯ ಎಳದುಟಿಗಳು ಅವಹೇಲನೆಯ ಮುನಿಸಿನಿಂದ ನಡುಗಿದವು. ಅವಳು ಅಳುವನ್ನು ಸಂಯಮಿಸಿಕೊಂಡು ತನ್ನ ತಂದೆಯ ಹತ್ತಿರ ಹೋಗಲೆಂದು ಹೊರಟಳು.

ಪಂಚಲೋಚನರು ತಮ್ಮ ಕೋಣೆಯ ಮುಂದುಗಡೆಯಲ್ಲಿ ಕಾಲೀಸ್ತೋತ್ರದ ಶ್ಲೋಕಗಳನ್ನು ಹೇಳುತ್ತ ಓಡಾಡುತ್ತಿದ್ದರು. ವಿಕಾರಮುಖದಿಂದ ತರಲನು ಅಲ್ಲಿಗೆ ಹೋದ. ಅವರು ಅವನನ್ನು ನೋಡಿಯೂ ಮಾತನಾಡಿಸದೆ ಸ್ತೋತ್ರಪಠನದಲ್ಲಿಯೇ ಮನವನ್ನು ಮುಳುಗಿಸಿದ್ದರು. ತರಲನು ಒಳಗೊಳಗೆ ಚಡಪಡಿಸುತ್ತ ಅವರ ಸ್ತೋತ್ರವು ಯಾವಾಗ ಮುಗಿಯುವುದೋ ಎಂದು ಕಾಯ್ದುಕೊಂಡು ನಿಂತ.

“ ಏನು ತರಲಾ, ಏನು ಬೇಕಾಗಿದೆ? ಪುಸ್ತಕ ಅಲ್ಲವೆ? ಅದು ಒಳ್ಳೆ ಉತ್ತಮ ಪುಸ್ತಕ. ಇನ್ನೆರಡು ದಿನ ನನ್ನ ಹತ್ತಿರ ಇರಲಿ. ‘ಕಾಲೀ ಕೈವಲ್ಯದಾಯಿನಿ’ಯನ್ನು ಬರೆಯುವುದಕ್ಕೆ ಅದರಿಂದ ಬಹಳ ಸಹಾಯವಾಗುವುದು.” ಸ್ತೋತ್ರವು ಪೂರಯಿಸಿದ ಬಳಿಕ ಪಂಚಲೋಚನರೆಂದರು.

ತರಲನು ಭಯವಿಹ್ವಲ ದೃಷ್ಟಿಯನ್ನು ಕೆಳಗೆ ಹಾಕಿ ನುಡಿದ: “ಅದು ಇರಲೊಲ್ಲದೇಕೆ. ನನಗೆ ಅದರ ಅಗತ್ಯವೇನೂ ಇಲ್ಲ. ಒಂದು ವಿಷಯ ಹೇಳಲು ಬಂದಿದ್ದೇನೆ.......”

"ಅದೇನು ವಿಷಯ ಹೇಳು. ನಿನ್ನಂತಹ ಒಳ್ಳೇ ಹುಡುಗರನ್ನೇ ನಾ ಕಾಣೆ"

ತರಲನು ಉಗುಳು ನುಂಗಿ, "ನಾನೀಗ ಮದುವೆ........"

ವಂಶಲೋಚನರು ಗಹಗಹಿಸಿ ನಕ್ಕರು. "ಮದುವೆ ಮಾಡಿಕೊಳ್ಳುವೆನೆಂದು ಹೇಳುವುದಕ್ಕೆ ಇಷ್ಟು ನಾಚಿಕೆಯೇ? ನಿಮ್ಮ ಮಾವ ನನ್ನ ಮುಂದೆ ಈ ವಿಷಯ ಪ್ರಸ್ತಾಪಮಾಡಿದ್ದೇ ಇಲ್ಲವಲ್ಲ! ಕನ್ಯೆ ಎಲ್ಲಿ ಗೊತ್ತಾಯಿತು?"

ಲಜ್ಜೆಯಿಂದ ಭಯದಿಂದ ಸಂಕೋಚದಿಂದ ತರಲನ ಮೋರೆ ಬೆಳ್ಳಗಾಯಿತು. ನಿಧಾನವಾಗಿ ಅವನೆಂದ: "ಇನ್ನೂ ಗೊತ್ತಾಗಿಲ್ಲ. ನಿಮ್ಮ ಒಪ್ಪಿಗೆಯನ್ನು ಪಡೆದು........"

ತರುಣನ ಗುರುಭಕ್ತಿಗೆ ವಿಧೇಯತೆಗೆ ವಂಶಲೋಚನರು ಸಂತುಷ್ಟರಾದರು. "ನಿನ್ನಂತಹ ಒಳ್ಳೆಯ ಹುಡುಗನನ್ನು ಅಳಿಯನನ್ನಾಗಿ ಪಡೆಯುವುದು ಹೆಣ್ಣಿನ ತಂದೆ ತಾಯಿಗಳ ಸೌಭಾಗ್ಯ. ನೀನು ನನ್ನ ಅನುಮತಿಯನ್ನು ಕೇಳಿ, ನನ್ನಲ್ಲಿ ಗೌರವವನ್ನು ತೋರಿದುದಕ್ಕೆ ನಾನೂ ನಿನ್ನನ್ನು ಹರಸುವೆ—ತಕ್ಕ ವಧುವನ್ನು ಹೊಂದಿ ಸುಖಿಯಾಗು," ಎಂದರು.

ತರಲನಿಗೆ ಮಾತನಾಡಲು ದನಿಯೇ ಹೊರಡದಾಯಿತು. ಕ್ಷೀಣಸ್ವರದಿಂದ ಹೇಗೋ ಏನೋ ಉಚ್ಚರಿಸಿದ: "ನಾನು ಹೈಮವತಿಯನ್ನು ಮದುವೆಯಾಗಲು ಇಷ್ಟಪಡುತ್ತೇನೆ."

ವಂಶಲೋಚನರು ಅವಾಕ್ಕಾಗಿ ಕಣ್ಣು ಹಿಗ್ಗಿಸಿ ತರಲನನ್ನೇ ನೋಡುತ್ತ ನಿಂತರು. ಕೆಲಹೊತ್ತಿನ ಮೇಲೆ ಚೇತರಿಸಿಕೊಂಡು ಅವರೆಂದರು: "ಆಂ! ಏನೆಂದೆ?"

ಈ ಸಲ ತರಲನು ಕೊಂಚ ಧೈರ್ಯಗೊಂಡು ಹೇಳಿದ: "ನಾನು ಹೈಮವತಿಯನ್ನು........"

ವಂಶಲೋಚನರು ಚೀರುದನಿಯಲ್ಲಿ ನುಡಿದರು: "ಹೊರಡು ಹೊರಡು. ನಡೆ, ನಮ್ಮ ಮನೆಯಿಂದ! ಈ ದುರುದ್ದೇಶದಿಂದಲೇ ತೋರಿಸಿಕೊಂಡ ಬೆಕ್ಕಿನ ಹಾಗೆ ಇಲ್ಲಿ ಬರುತ್ತಿದ್ದೆಯಾ? ಗಂಡ ಸತ್ತವಳಿಗೆ ಮತ್ತೆ ಮದುವೆಯೆ? ಶಾಂತಂ ಪಾಪಂ! ಕೀಳು ವಂಶದವನೆಂಬ ಕಾರಣದಿಂದ ಕನ್ಯೆಯಾಗಿದ್ದಾಗ ನಿನಗೆ ಮಗಳನ್ನು ಕೊಡಲಿಲ್ಲ, ಗೊತ್ತಿಲ್ಲವೆ? ಈಗಲಂತೂ ವಿಧವೆ!"

ಮುದುಕರು ಭರ್ರನೆ ಕೋಣೆಯೊಳಗೆ ಹೋಗಿ ತರಲನ ಪುಸ್ತಕವನ್ನು ತಂದು ಅವನ ಮೋರೆಯಮೇಲೆಸೆದರು. "ನಡೆ, ಇಲ್ಲಿಂದ ಈ ಕ್ಷಣ! ಇಂತಹ ಮ್ಲೇಚ್ಛಾಚಾರೀ ಪುಸ್ತಕಗಳನ್ನು ಓದಿಯೇ ಆರ್ಯಸಂತಾನದ ಅಧಃಪತನ ವಾಗುತ್ತಿದೆ! ಈಗಾಡಿದ್ದೇ, ಇನ್ನೊಮ್ಮೆ ಈ ಮಾತು ಆಡಿಗೀಡೀಯೆ. ಹೈಮ ವತಿಯ ಕಿವಿಗೆ ಬಿದ್ದರೆ ಅವಳು ಚಲವಿಚಲೆಯಾದಾಳು! ಜನರು ಕೇಳಿದರೆ ಅವಳು ಕಲಂಕಿತೆಯಾದಾಳು ! ತೆಪ್ಪಗೆ ಬಾಯಿ ಮುಚ್ಚಿಕೊಂಡು ಹೋಗು. ಇನ್ನು ನಮ್ಮ ಮನೆಯ ಹೊಸತಿಲೊಳಗೆ ಕಾಲಿಡಬೇಡ!" ಎಂದು ಅವರು ಗದರಿದರು.

ಕಳವು ಮಾಡಿದವನಂತೆ ಮೈಮುದುರಿಕೊಂಡು ತರಲನು ಮೆಲ್ಲಮೆಲ್ಲನೆ ಹೊರಟುಹೋದ. ಜನರೊಳಗೆ ಹರಲಿಯಾದೀತೆಂದು ಮಂಪಲೋಚನರು ತರಲನಿಗೆ ಎಚ್ಚರಿಕೆ ಕೊಟ್ಟು ಬಯ್ದು ಕಳಿಸಿದರೂ ಅವರ ಆ ಒದರಾಟ ದಿಂದಲೇ ಓಣಿಯ ಜನರಿಗೆ ಯಾವುದೂ ತಿಳಿಯದೆ ಉಳಿಯಲಿಲ್ಲ.

ಗೋವರ್ಧನನು ಮಲಗಿದಲ್ಲಿಯೇ ಕೇಳಿ, "ಎಲಾ! ಪುನಃ ವಿಧವೆಯ ವಿವಾಹವೆ? ಎಂತಹ ನೀಚಪ್ರವೃತ್ತಿ!" ಎಂದು ಮನಸಿನೊಳಗೇ ಎಂದು ಕೊಂಡ.

ಮುದುಕನ ಒದರಾಟವನ್ನು ಕೇಳಿದ ಅನ್ನಪೂರ್ಣೆ ತಂದೆಯ ಹತ್ತಿರಕ್ಕೆ ಓಡಿಹೋಗಿ ಹೇಳಿದಳು: "ಅಪ್ಪಾ, ಅಜ್ಜ ಕಾಕಾನನ್ನು ಒಳಿತಾಗಿ ಬಯ್ದು ಓಡಿಸಿಬಿಟ್ಟರು. ಬಹಳ ಚೆಲೋ ಆಯಿತು! ಎಂಥ ದುಷ್ಟ!" ಸ್ವಲ್ಪ ಹೊತ್ತು ತಡೆದು ಅವಳು ಮತ್ತೆಂದಳು: "ಆದರೆ ಅಪ್ಪಾ, ಅವರು ಬಯ್ಯುವುದನ್ನು ಅವ್ವ ಬಾಗಿಲ ಹಿಂದೆ ನಿಂತು ಕೇಳಿದಳು; ಅಳುತ್ತಳುತ್ತ ಮನೆಯೊಳಗೆ ಹೊರಟುಹೋದಳು."

"ನೀನು ನಿನ್ನ ಅವ್ವನ ಹತ್ತಿರ ಹೋಗು ಮಗೂ" ಗೋವರ್ಧನನು ಉಸಿರ್ಗರೆದು ಹೇಳಿದ.

ಹೈಮವತಿಯ ಕೋಣೆಗೆ ಓಡಿದಳು ಅನ್ನಪೂರ್ಣೆ. ಅವಳು ನೆಲದ ಮೇಲೆ ಬಿದ್ದುಕೊಂಡು ಬಿಕ್ಕಿಬಿಕ್ಕಿ ಅಳುತ್ತಲಿದ್ದಳು. ನೋಡಿ ಅಚ್ಚರಿಯಿಂದ ಅನ್ನಪೂರ್ಣೆ ಸ್ತಂಭಿತಳಾದಳು ಅವ್ವನನ್ನು ಮಾತನಾಡಿಸಲು ಅವಳಿಗೆ ಧೈರ್ಯ

ಸಾಲಲಿಲ್ಲ. ಕೊಂಚ ಹೊತ್ತು ಸುಮ್ಮನೆ ನಿಂತುಕೊಂಡು ತಾನೂ ಅಳತೊಡ ಗಿದಳು. ಮಗುವಿನ ಅಳುವನ್ನು ಕೇಳಿ ಗಡಬಡಿಸಿ ಎದ್ದು, ಕಣ್ಣುಗಳನ್ನೊರಸಿ ಕೊಂಡು, ಅವಳನ್ನೆತ್ತಿಕೊಂಡು ನುಡಿದಳು: "ನಾನು ಸುಳ್ಳು ಸುಳ್ಳೇ ಅಳು-ತ್ತಿದ್ದೆ ಮಗೂ. ನೀನು ಅತ್ತರೆ ನಿಜವಾಗಿಯೂ ಅಳುತ್ತೇನೆ; ಸುಮ್ಮನಿರಮ್ಮಾ."

ಮುಷ್ಟಿಯಿಂದ ಕಣ್ಣುಜ್ಜಿಕೊಳ್ಳುತ್ತ ಅನ್ನಪೂರ್ಣೆ ಎಂದಳು: "ನಾನು ಇನ್ನು ಮೇಲೆ ಕಾಕಾನಿಗೆ ಏನೂ ಅನ್ನುವುದಿಲ್ಲ ಅವ್ವಾ, ಪ್ರೀತಿ ಮಾಡುತ್ತೇನೆ."

ಒತ್ತರಿಸುವ ಶೋಕವನ್ನು ಒತ್ತಾಯದಿಂದ ಒಳಗೆಯೇ ಒತ್ತಿಟ್ಟು, ಹೈಮವತಿ ನಗುನಗುತ್ತ ಅನ್ನಪೂರ್ಣೆಯನ್ನು ಮುತ್ತಿಟ್ಟಳು. "ನಡೆ, ನಿಮ್ಮ ಅಪ್ಪನನ್ನು ನೋಡಿಕೊಂಡು ಬರುವಾ."

ಅವಳು ಅನ್ನಪೂರ್ಣೆಯನ್ನು ಬಗಲೊಳಗೆತ್ತಿಕೊಂಡು ಗೋರ್ಧನನ ಕೋಣೆಗೆ ಹೋಗಿ ಹಾಸಿಗೆಯ ಬಳಿ ನಿಂತು, ದಿನದಂತೆಯೇ ಉತ್ಫುಲ್ಲವದನ ದಿಂದ ಕೇಳಿದಳು: "ಹೇಗಿದ್ದೀರಿ ಅಣ್ಣಾ? ಮೋರೆ ತೊಳೆದುಕೊಳ್ಳಲು ನೀರನ್ನು ತಂದುಕೊಡಲೆ?"

ಹೈಮವತಿಯ ನಗುಮೊಗವನ್ನು ಕಂಡು ಗೋವರ್ಧನನು ಮೊದಲು ಬೆರಗಾದ, ಬಳಿಕ ಮೋಸಹೋದ. ಅವಳು ಅಳುತ್ತಳುತ್ತ ಒಳಗೆ ಓಡಿ ಹೋದಳೆಂದು ಅನ್ನಪೂರ್ಣೆ ಹೇಳಿದುದು, ಒಂದೋ ಮಗುವಿನ ಮುಳ್ಳು ತಿಳಿ-ವಳಿಕೆ ಇದ್ದಿರಬಹುದು; ಇಲ್ಲವೆ, ತರಲನ ಮಾತಿನಿಂದ ಅಪಮಾನಿತಳಾದ ವಿಧವೆಯ ಅಳುವಿರಬಹುದು, ಸತೀತ್ವದ ಗೌರವಕ್ಕೆ ಧಕ್ಕೆ ತಗುಲಿತೆಂಬ ವೇದ ನೆಯ ಅಳುವಿರಬಹುದು; ದುರಾಚಾರಿಯಾದ ಲೋಭಿಯ ವಿಷಯದಲ್ಲಿ ಉಂಟಾದ ಪ್ರೇಮಭಂಗದ ನಿರಾಶೆಯ ಅಳುವಾಗಿರಲಾರದು ಎಂದು ಅವನಿಗೆ ಎನಿಸಿತು. ತರಲನ ಕಡೆ ಅವಳ ಮನದೊಲವಿರುವುದೆಂದು ಅವನು ಕಂಡಿದ್ದರೂ ಚಿಕ್ಕಂದಿನ ಪರಿಚಯದ ಸಲುಗೆಯ ಹೊರತು ಬೇರೇನೂ ಇಲ್ಲವೆಂದು ಅವನಿ-ಗೆನಿಸಿತ್ತು.

ಯಾವ ಅಸಾಧಾರಣ ಘಟನೆಯೂ ಘಟಿಸಿಲ್ಲವೆಂಬಂತೆ, ಗೋವರ್ಧನ ನಿಗೆ ಮೋರೆ ತೊಳೆಯಲು ನೀರು ಹಾಕಿ, ಔಷಧವನ್ನು ಕುಡಿಸಿ, ಪಥ್ಯವನ್ನು ಸಿದ್ಧಗೊಳಿಸಲು ಅವಳು ಹೊರಡುವವಳು. ಅಷ್ಟರಲ್ಲಿ ಓಣಿಯ ಕೆಲವು ಹೆಣ್ಣು

ಮಕ್ಕಳು ಮನೆಯೊಳಗೆ ಬರುತ್ತಿರುವುದು ಕಾಣಿಸಿತು. ಅವರ ಆಗಮನದ ಸದು ದ್ದೇಶವನ್ನು ಅವಳು ಅರಿತುಕೊಂಡಳು—ಇಲ್ಲಿ ನಡೆದ ವಿಷಯ ತಂದೆಯ್ಯ ಕಂಠದಿಂದ ಓಣಿಯ ತುಂಬ ಪ್ರಚುರವಾಗಿದೆ, ವ್ಯಾಪಾರ ಎಷ್ಟು ದೂರದ ವರೆಗೆ ಹೋಗಿದೆಯೆಂಬುದನ್ನು ಕೆದಕಿ ತೆಗೆಯಲು ಇವರು ದಯೆಮಾಡಿಸಿ ದ್ದಾರೆ. ಪರ ಊರಿನ ಅಪರಿಚಿತ ಪುರುಷನಿದ್ದಲ್ಲಿ ಆ ಹೆಂಗುಸರು ಬರಲಾರ ರೆಂದು ಭಾವಿಸಿ ಹೈಮವತಿ ಗೋವರ್ಧನನ ಕೋಣೆಯಲ್ಲಿಯೇ ಕುಳಿತುಬಿಟ್ಟಳು; ಇಲ್ಲದ ಮಾತೆತ್ತಿ ಹರಟೆಹೊಡೆಯುತ್ತ ಆತ್ಮರಕ್ಷಣೆಗಾಗಿ ಹೊತ್ತುಗಳೆಯತೊಡಗಿ ದಳು.

ಇತ್ತ ಹೈಮವತಿ ಆತ್ಮರಕ್ಷಣೆಯ ಪ್ರಯತ್ನದಲ್ಲಿದ್ದಾಗ, ವಂಶಲೋಚ ನರು ಚಂಡೀಮಂಟಪದಲ್ಲಿ ಕುಳಿತು ತಾಯಿಗೆ ಕೈಜೋಡಿಸಿ ಪಾಪಕ್ಷಾಲನೆ ಗಾಗಿ ಹೇಳಿಕೊಳ್ಳುತ್ತಲಿದ್ದರು. “ತಾಯಿ, ನನ್ನಲ್ಲಿ ಪಾಪದ ಬೀಜ ಯಾವ ಛಿದ್ರದಿಂದ ಹೊಕ್ಕಿತೋ, ನನ್ನ ಕಿವಿಗಳು ಇಂತಹ ಮಾತು ಕೇಳಬೇಕಾಯಿತೆ? ಯಾರೂ ಧರ್ಮಭ್ರಷ್ಟರಾಗದಂತೆ ಎಲ್ಲರಿಗೂ ಸದ್ಬುದ್ಧಿಯನ್ನು ದಯ ಪಾಲಿಸು ಮಾತೆ! ಮಹಾಸತಿ ಹೈಮವತಿಯನ್ನು ರಕ್ಷಿಸು .......”

ಇಷ್ಟರೊಳಗೆ ಪರಚರ್ಚಾಕಾತರರಾದ ಕೇರಿಯ ಕೆಲಜನ ಪುರುಷರೂ ಚಿತ್ತೈಸಿದರು. ವಂಶಲೋಚನರು ತಮ್ಮಷ್ಟಕ್ಕೆ ತಾವು ಎವೆಯಿಕ್ಕದ ನೋಟ ವನ್ನು ಕಾಳೀಮೂರ್ತಿಯಲ್ಲಿ ನೆಲೆಗೊಳಿಸಿ ಸ್ತೋತ್ರಶ್ಲೋಕಗಳನ್ನು ಹೇಳುವುದ ರಲ್ಲಿ ಮೈಮರೆತರು. ಬಂದವರು ಮಂದಿರದ ಅಂಗಳದಲ್ಲಿ ನಿಂತು ಅವರ ದಾರಿ ಕಾಯ್ದೇ ಕಾಯ್ದರು ಅವರ ದೇವತಾಸ್ತುತಿ ಬೇರೆ ಮುಗಿಯಲಿಲ್ಲ; ಒಂದರ ಹಿಂದೊಂದರಂತೆ ಶ್ಲೋಕಗಳು ಹೊರಪುತ್ತಲೇ ಇದ್ದವು ದಿನಾಲು ಇಪ್ಪತ್ತು ನಾಲ್ಕು ಗಂಟೆಯೂ ಇವರದು ಇದೇ ಹಾಡೆಂದು ತಿಳಿದಿದ್ದ ಜನರು ಅವರ ಆಶೆಯನ್ನೇ ಬಿಟ್ಟು, ಗೋವರ್ಧನನನ್ನು ಕೆಣಕಿದರೆ ತಮ್ಮ ಕೆಲಸವಾಗುವು ದೆಂದು ಯೋಚಿಸಿ ಆ ಕಡೆ ನಡೆದರು.

ಗಂಡುಸರ ದಂಡಿಗೆ ಇಂಬುಮಾಡಿಕೊಡುವುದಕ್ಕಾಗಿ ಹೈಮವತಿ ಕೋಟೆ ಯಿಂದ ಹೊರಹೊರಡಲೇಬೇಕಾಯಿತು. ನಿಶ್ಚಿತ ಕಾರ್ಯವನ್ನು ಸಾಧಿಸಿ ಕೊಂಡೇ ಹೋಗಬೇಕೆಂಬ ಸಂಕಲ್ಪದಿಂದ ಬಂದಿದ್ದ ಹೆಂಗುಸರು ಅವಳಿಗಾಗಿ

ಇನ್ನೂ ಕಾಯ್ದೇ ಇದ್ದರು. ಕಾಮಿನೀ ಗಯಲಾನಿ ಕೇಳಿದಳು: "ಏನಮ್ಮಾ, ಊರೊಳಗೆ ಏನು ಮಾತಾಡುತ್ತಾರೆ ಗೊತ್ತೇನಕ್ಕ?"

ಕೋಪವನ್ನು ನುಂಗಿಕೊಂಡು ಹೈಮವತಿ ನಗುತ್ತಲೇ ಉತ್ತರವಿತ್ತಳು: "ಹಾಂ, ನನ್ನ ಉಡಿಕೆಯ ಸಂಬಂಧ ಆಗುವುದಿದೆ, ಆದು ನಿಶ್ಚಿತವಾದರೆ ನಿಮಗೆ ಔತಣ ಹೇಳುವೆ, ತಿಳಿಯಿತೇ !"

ಹೈಮವತಿಯ ಮುಖದಲ್ಲಿ ಲಜ್ಜೆ ನೆಲಸಿರಬಹುದು, ವ್ಯಥೆ ಆವರಿಸಿರ ಬಹುದು ಎಂಬ ಆಶೆಯನ್ನಿಟ್ಟುಕೊಂಡು ಬಂದಿದ್ದ ಆ ಹೆಂಗಳೆಯರಿಗೆ ಬಹಳ ನಿರಾಶೆಯಾಯಿತು. ಅವರು ಇನ್ನೂ ಕೆಲವು ಕಲ್ಲುಗಳನ್ನು ಒಗೆದು ನೋಡಿ ದರು. ಅವರ ಒಂದೊಂದು ಮಾತಿಗೂ ಹೈಮವತಿ ತಕ್ಕ ಉತ್ತರವನ್ನೇ ಕೊಟ್ಟಳು.

ಗಂಡುಸರು ಗೋವರ್ಧನನನ್ನು ಅವನ ಪ್ರಕೃತಿಯ ಬಗ್ಗೆ ವಿಚಾರಿಸುತ್ತ, ತರಲ-ಹೈಮವತಿಯರ ಪಾಪವಿಚಾರದ ಮಾತನ್ನೆತ್ತಿದರು. ಅದಕ್ಕವನು ತನಗೆ ಯಾವುದೂ ಗೊತ್ತಿಲ್ಲವೆಂದೂ ತನ್ನದೇ ತನಗೆ ಸಾಕಾಗಿಹೋಗಿದೆ, ಯಾವು ದನ್ನು ಕೇಳುವುದಕ್ಕೂ ಸರಿಯಾದ ಸ್ಥಿತಿಯಿಲ್ಲವೆಂದೂ ಹೇಳಿದ. ಮರು ಸವಾಲಿನಲ್ಲಿಯೂ ಗೋವರ್ಧನನಿಂದ ಯಾವ ವಿಷಯವೂ ಹೊರಡಲಿಲ್ಲ. ಬಂದ ಜನರ ಉತ್ಸಾಹಭಂಗವಾಗಿ ಅವರು ಅವನ ಮುಖಭಾವಕ್ಕೇ ಅರ್ಥ ಹಚ್ಚುತ್ತ, ತಮ್ಮತಮ್ಮೊಳಗೇ ತರ್ಕವಿತರ್ಕ ಮಾಡುತ್ತ ಹೊರಟುಹೋದರು.

ಜನ ಹೊರಟುಹೋದ ಮೇಲೆ ವಂಶಲೋಚನರು, ಮಗಳು ಅಪ- ಮಾನದ ಆಘಾತದಿಂದ ಕಾತರಳಾಗಿರಬಹುದು, ಅವಳನ್ನು ನೋಡಿ ಸಂತೈ- ಸುವ ಎಂದು ಯೋಚಿಸಿಕೊಂಡೇ ಒಳಗೆ ಬಂದರು. ಆದರೆ ಒಮ್ಮೆಲೆ ನೇರ ವಾಗಿ ಅವಳ ಹತ್ತಿರ ಹೋಗಲಾಗದೆ ಗೋವರ್ಧನನ ಕೋಣೆಗೆ ಹೋದರು. ತಂದೆ ಬಂದುದನ್ನು ಕಂಡು ಹೈಮವತಿಯೇ ನಗುನಗುತ್ತ ಅಲ್ಲಿಗೆ ಬಂದು ಕೇಳಿದಳು: "ಅಪ್ಪಾ, ಸ್ನಾನ ಯಾವಾಗ ಮಾಡುತ್ತೀರಿ? ಹೊತ್ತು ಬಹಳವಾಗಿ ಬಿಟ್ಟಿದೆ !"

ಮಗಳ ಹಸನ್ಮುಖವನ್ನು ನೋಡಿ ಎದೆಯ ಮೇಲಿನ ದೊಡ್ಡದೊಂದು ಭಾರವಿಳಿದಂತಾಗಿ ವಂಶಲೋಚನರು ನಿಡಿದಾದ ಉಸಿರನ್ನು ಹೊರಗೆ ಹಾಕಿ

ದರು. " ಈಗ ಮಾಡುತ್ತೇನಮ್ಮಾ — ಇಲ್ಲಿ ಕೇಳು ಮಗೂ, ತರಲ ಇನ್ನು ಗೋವರ್ಧನನ ಸೇವೆಗೆ ಬರುವುದಿಲ್ಲ. ಏನಾದರೂ ಮಾಡುವುದಿದ್ದರೆ ನನಗೆ ಹೇಳು," ಎಂದರು.

ಹೊರಸೂಸಲಿರುವ ಕಂಬನಿಗಳನ್ನು ತಡೆಹಿಡಿದು ನಗುತ್ತ ಹೈಮವತಿ ಹೇಳಿದಳು: "ಅವನು ಬರದಿದ್ದರಿಲ್ಲ ಅಪ್ಪಾ, ನಾನೊಬ್ಬಳೇ ಎಲ್ಲಾ ಮಾಡುತ್ತೇನೆ. ನೀವು ಚಿಂತಿಸಬೇಡಿರಿ."

" ನಾನೀಗ ನೆಟ್ಟಗಾಗಿದ್ದೇನೆ. ನಾನೇ ಎಲ್ಲವನ್ನು ಮಾಡಿಕೊಳ್ಳಬಲ್ಲೆ. ನೀವು ಒಪ್ಪುವುದಾದರೆ ಊರಿಗೆ ಹೋಗುತ್ತೇನೆ," ಎಂದು ಗೋವರ್ಧನನು ವ್ಯಸ್ತನಾಗಿ ನುಡಿದ.

" ಡಾಕ್ಟರು ಒಪ್ಪಿದರೆ ಹೋಗುವೆಯಂತೆ. ಆದರೆ ನಿನ್ನ ಮಗಳನ್ನು ಇಲ್ಲಿಯೇ ಬಿಟ್ಟುಹೋಗು. ನಮ್ಮ ಹಿಮೂಗೆ ಒಂದು ಅವಲಂಬನವಿರಲಿ." ಕ್ಷಣ ಹೊತ್ತು ಗಂಭೀರವಾಗಿ ಗೋವರ್ಧನನ ಕಡೆ ನೋಡುತ್ತಲಿದ್ದು ವಂಶಲೋಚನರು ಹೇಳಿದರು. ಮನೆಯೊಳಗೆ ಪುರುಷವ್ಯಕ್ತಿಯನ್ನು ಇಟ್ಟುಕೊಳ್ಳಲು ಭಯ, ಮಗಳನ್ನು ನಿಃಸಂಗಳನ್ನಾಗಿ ಮಾಡುವುದೂ ದುಃಖದಾಯಕ ಆವರಿಗೆ.

ತಂದೆಯ ಕಣ್ಣುಗಳಲ್ಲಿ ಕಂಬನಿಯನ್ನು ನೋಡಿ ಹೈಮವತಿ ಅಧೀರೆಯಾದರೂ ನಗುಮೊಗದಿಂದ ನುಡಿದಳು: " ಹಾಂ, ಅನುವನ್ನು ನಾನು ಬಿಡುವುದಿಲ್ಲ."

ಶೋಕಾರ್ತ ಹಾಸ್ಯದೊಡನೆ ಗೋವರ್ಧನನೂ ಹೇಳಿದ: " ನಾನೂ ಅನುವನ್ನು ಪುನಃ ತಬ್ಬಲಿಯಾಗಿ ಮಾಡಲಾರೆ."

ಕ್ರಮಶಃ ಕಂಬನಿಗಳನ್ನು ತಡೆಗಟ್ಟುವುದು ಹೈಮವತಿಗೆ ಅಸಾಧ್ಯವಾಯಿತು. " ಅಪ್ಪಾ, ನೀವಿನ್ನು ಸ್ನಾನಕ್ಕೆ ಹೋಗಿರಿ. ನಾನಿವರಿಗೆ ಒಂದಿಷ್ಟು ಹಾಲನ್ನು ಕಾಯಿಸಿ ಕೊಡುತ್ತೇನೆ" ಎಂದು ನುಡಿದು ಅವಳು ಲಗುಬಗೆಯಿಂದ ಮನೆಯೊಳಗಡೆ ತೆರಳಿದಳು. ಆದರೆ ಅವಳಿಗೆ ಮನವಾರೆ ಅಳುವುದಕ್ಕೆ ಅವಕಾಶವೇನೂ ಸಿಕ್ಕಲಿಲ್ಲ. ಕೇರಿಯ ಹತ್ತುಹನ್ನೆರಡು ಜನ ಮುದುಕಿಯರೂ ಯುವತಿಯರೂ ಇನ್ನೂ ಇದ್ದೇ ಇದ್ದರು. ಹೈಮವತಿ ಅವರೆಲ್ಲರಿಗೆ ನಗುಮೊಗದಿಂದಲೇ ಆದರದ ಮಾತುಗಳನ್ನಾಡಿ, ಅವರನ್ನು ಬೇಗನೆಯೆ ಅಲ್ಲಿಂದ ತೊಲಗಿ

ಸುವ ಉದ್ದೇಶದಿಂದ, ಅನ್ನಪೂರ್ಣೆಗೆ ತಿಂಡಿ ಕೊಡುವುದು, ಗೋವರ್ಧನನಿಗೆ ಹಾಲು ಕಾಯಿಸಿ ಕೊಡುವುದು, ತಂಪೆಯ ಜಳಕಕ್ಕೆ ನೀರು-ಪಂಜೆ ಒದವಿಸುವುದು, ಕಾಲಿಯ ಪೂಜಾಸಾಮಗ್ರಿಗಳನ್ನು ಸಜ್ಜುಗೊಳಿಸುವುದು ಮೊದಲಾದ ಕೆಲಸಗಳ ನೆವದಿಂದ ಗಡಿಬಿಡಿಯಲ್ಲಿ ಆ ಕೋಣೆಯಿಂದೀಕೋಣೆಗೆ ಈ ಕೋಣೆಯಿಂದಾಕೋಣೆಗೆ ಆಡ್ಡಾಡಬೇಕಾಯಿತು.

೮

ದುಃಖದ ಸಮಯಗಳಲ್ಲಿ ಅಳದೆ ಇರುವುದೇ ಕಠಿನ; ಆ ಅಳುವನ್ನು ನಗೆಯಾಗಿ ಮಾರ್ಪಡಿಸಿ ಬಚ್ಚಿಡುವುದು ಅದಕ್ಕಿಂತಲೂ ಕಠಿನ. ಎಲ್ಲರ ಎಲ್ಲ ಅಗತ್ಯಗಳನ್ನು ಪೂರಯಿಸಿ ಹೈಮವತಿ ರಾತ್ರಿ ಬಹಳ ಹೊತ್ತಿನ ಮೇಲೆ ತನ್ನ ಕೋಣೆಗೆ ಹೋದಾಗ ಅತ್ಯಂತ ವಿಹ್ವಲೆಯಾಗಿದ್ದಳು. ಹಾಸಿಗೆಯ ಮೇಲೆ ಬಿದ್ದುಕೊಂಡುದೇ ತಡ, ಸ್ಯೈರಣೆಯ ಅಣೆಕಟ್ಟನ್ನೊಡೆದುಕೊಂಡು ಅವಳ ಶೋಕವು ಧುಮ್ಮಿಕ್ಕಿತು. ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಆ ಅಳು ಅನಂತವಾದುದು. ಅತ್ತೇ ಅತ್ತಳು. ಗೋವರ್ಧನನಿಗೆ ನಿದ್ದೆ ಹತ್ತಿರಲಿಲ್ಲ. ವಿಶಾಲವಾದ ನಡುಮನೆಯನ್ನು ಹಾಯ್ದು, ಆಚೆಯ ಕೋಣೆಯಲ್ಲಿದ್ದ ಆವನಿಗೆ ಆ ಅಳು ಅಸ್ಪಷ್ಟವಾಗಿ ಕೇಳುತ್ತಿದ್ದಿತು.

ರಾತ್ರಿ ಮಧ್ಯವನ್ನು ಮೀರಿತು. ಹೈಮವತಿ ಇನ್ನೂ ಅಳುತ್ತಲೇ ಇದ್ದಳು. ಹಠಾತ್ ಮುಂದಲೆಯನ್ನು ಯಾರೋ ಸೋಂಕಿದಂತಾಯಿತು. ಅವಳು ಬೆಚ್ಚಿಬಿದ್ದು ಮೊಗವೆತ್ತಿ ನೋಡಿದಳು. ಕಿಡಿಕಿಯಲ್ಲಿ ತರಲ. ಸಲಾಕೆಗಳ ಸಂದಿನೊಳಗಿಂದ ಕೈನೀಡಿ ಅವಳ ಮುಂದಲೆಯನ್ನು ಸವರುತ್ತಿದ್ದ. ಬರಗಾಲದಲ್ಲಿ ನಿರಾಹಾರದಿಂದ ಬಳಲಿದಕ್ಷುಧಾರ್ತರಂತೆ, ಹೈಮವತಿ ಅವನ ಕೈಯನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡು, ಅದರ ಮೇಲೆ ಮುಖವಿಟ್ಟು ಅಳತೊಡಗಿದಳು.

"ಅಳುವುದೇತಕ್ಕೆ ಹೇಮ! ನಮ್ಮ ಮಿಲನಕ್ಕೆ ಮನುಷ್ಯರು ಯಾರೂ ಅಡ್ಡಿ ತರಲಾರರು. ಊರಿನ ನಾಯಿಗಳೆಲ್ಲಾ ಕೆರಳಿವೆ; ಒಂದೇ ಧ್ವನಿಯಿಂದ ಬೊಗುಳುತ್ತಿವೆ. ನಾನು ಇಲ್ಲಿದ್ದರೆ ನನ್ನ ತಲೆಯೂ ಕೆಟ್ಟೀತು. ಇಂದು ನಸುಕಿನ

ಗಾಡಿಗೇ ಊರಿಗೆ ಹೋಗುತ್ತೇನೆ. ತಂದೆ ತಾಯಿ ತೀರಿದ ಬಳಿಕ ಮಾವನ ಮನೆಯಲ್ಲಿ ಬಂದಿದ್ದವನು ತಿರುಗಿ ಹೋಗಿಯೇ ಇಲ್ಲ. ಹೋಗಿ ಮನೆಯನ್ನು ಇರಲಿಕ್ಕೆ ಬರುವಷ್ಟು ಮಟ್ಟಿಗೆ ಪರಿಷ್ಕಾರಗೊಳಿಸಿ, ಬಂದು ನಿನ್ನನ್ನು ಕರೆದು ಕೊಂಡು ಹೋಗುತ್ತೇನೆ. ಆಮೇಲೆ ಈ ನಾಯಿಗಳು 'ಹಾಯ್ ಇದೇ-ನಾಯಿತು!' ಎಂದು ಬೇಕಾದಷ್ಟು ಬೊಗುಳಿಕೊಳ್ಳಲಿ, ಕೇಳುವವರು ಯಾರು!"

ಹೈಮವತಿ ಮೋರೆಯನ್ನು ಮೇಲೆತ್ತಿ ತರಲನ ಕಡೆ ನೋಡಿದಳು. ಅವಳ ನಿರಾಶವಾದ ಮನಸಿನಲ್ಲಿ ಆಶೆ ಮೊಳೆಯಿತು. ತರಲನು ಮತ್ತೆ ಹೇಳಿದ: "ಈಗ ಗಾಡಿಯ ಹೊತ್ತಾಯಿತು; ನಾನು ಹೋಗುತ್ತೇನೆ. ಒಂದು ವಾರ ದೊಳಗೆ ತಿರುಗಿ ಬರುತ್ತೇನೆ. ನೀನು ಹೊರಡಲು ಸಿದ್ಧಳಾಗಿರು. ಮಧ್ಯ ರಾತ್ರಿಯ ಗಾಡಿಗೆ ಬಂದು, ನಸುಕಿನ ಗಾಡಿಗೇ ಕರೆದುಕೊಂಡುಹೋಗುತ್ತೇನೆ."

ಆಶೆ ಹೈಮವತಿಗೆ ತಿರುಗಿ ಬಲ ಕೊಟ್ಟಿತು. ಅವಳು ತರಲನ ಕೈಯನ್ನು ಹಿಡಿದ ಮುಷ್ಟಿಯನ್ನು ಸಡಿಲಿಸಿದಳು. ಅವನು ಕೈಯನ್ನು ಹಿಂದಕ್ಕೆ ತೆಗೆದು ಕೊಂಡು, "ಏನೂ ಭಯಪಡಬೇಡ ಹೈಮ. ಖಂಡಿತ, ಖಂಡಿತವಾಗಿ ಕರೆದು ಕೊಂಡು ಹೋಗುತ್ತೇನೆ," ಎಂದು ನುಡಿದು ಕಿಡಿಕಿಯಿಂದ ಅದೃಶ್ಯನಾದ.

ಮುಂಜಾನೆ ಹೈಮವತಿ ಮೈತೊಳೆದುಕೊಂಡು, ಅನ್ನಪೂರ್ಣೆಯನ್ನು ಕಂಕುಳಲ್ಲಿ ಎತ್ತಿಕೊಂಡು ತನ್ನ ಕೋಣೆಗೆ ಬಂದಾಗ ಗೋವರ್ಧನನು ಅವ-ಳನ್ನು ನೋಡಿದ. ಬೆಳತನಕ ಅತ್ತಿದ್ದರೂ ಅವಳ ಮೊಗದಲ್ಲಿ ಬಳಲಿಕೆಯ ಲವಲೇಶವೂ ಇರಲಿಲ್ಲ. ಯಾವುದೋ ಒಂದು ದುರ್ಲಭವಾದ ಸೊಗಸಿನ ಕಳೆ ಉಕ್ಕುತ್ತಿದ್ದಿತು. ಅದನ್ನು ಕಂಡು ಗೋವರ್ಧನನು ಮತ್ತೆ ಮೋಸ ಹೋದ. ಇಡೀ ರಾತ್ರಿ ಅವಳ ಅಳುವೆಂದು ತಾನು ಭಾವಿಸಿಕೊಂಡಿದ್ದ ಶಬ್ದ ಅಳುವಿನದಾಗಿರಲಿಕ್ಕಿಲ್ಲ, ಹಾಳು ಮನೆಯೊಳಗೆ ಗಾಳಿ ಹೊಕ್ಕು ಆ ರೀತಿ ಶಬ್ದ ವಾಗಿರಬೇಕೆಂದು ಅವನು ತಿಳಿದುಕೊಂಡ. ಎಂತಲೇ ಅವನ ಮುಖದಲ್ಲಿ ಸಂತೋಷವು ಒಡಮೂಡಿತು.

ಹೈಮವತಿ ಗೋವರ್ಧನನಿಗೆ ಔಷಧ ಪಥ್ಯ ಕೊಡುತ್ತಿದ್ದಾಗ ವಂಶ-ಲೋಚನರು ಕೋಣೆಯೊಳಗೆ ಬಂದು ಹೇಳಿದರು: "ತರಲ ನಿನ್ನೆ ರಾತ್ರಿ ಓಡಿ ಹೋಗಿದ್ದಾನೆ. ಅವರ ಮಾವ ಹುಡುಕಲಿಕ್ಕೆ ಬಂದಿದ್ದರಿಲ್ಲಿ. ಪಾಪ ಮಾಡಿದ

ಮನುಷ್ಯನಿಗೆ ನಾಚಿಕೆಯೆನಿಸುತ್ತದೆ, ಮುಂದಿಗೆ ಮೋರೆ ಹೇಗೆ ತೋರಿಸಿಯಾನು! ತಾಯಿ, ಬ್ರಹ್ಮಮಯೀ!"

ಗೋವರ್ಧನನು ಉತ್ಕಂಠಿತನಾಗಿ ಹೈಮವತಿಯ ಕಡೆ ನೋಡಿದ. ಅವಳು ತಲೆ ತಗ್ಗಿಸಿಕೊಂಡು ಚಮಚೆಯಿಂದ ಹಾಲಿನಲ್ಲಿ ಸಕ್ಕರೆಯನ್ನು ಕದಡುತ್ತಿದ್ದಳು. ಅವಳ ಕೊನೆದುಟಿಯಲ್ಲಿ ನಗುವಿನ ರೇಷೆ ಕಾಣಿಸಿತು. ಅದನ್ನು ಕಂಡು ವಂಶಲೋಚನ ಗೋವರ್ಧನರಿಬ್ಬರೂ ಮೋಸಹೋದರು. ತರಲನ ಪೀಡೆ ತಪ್ಪಿಹೋಯಿತೆಂದು ಅವಳಿಗೆ ಸಂತೋಷವಾಯಿತೆಂದು ಅವರು ಭಾವಿಸಿದರು.

ವಂಶಲೋಚನರು ಆನಂದಿತರಾಗಿ ಗೋವರ್ಧನನಿಗೆಂದರು: "ಗೋವರ್ಧನ, ನೀನಿನ್ನು ಐದಾರು ದಿನ ಇದ್ದು ಆ ಮೇಲೆ ಊರಿಗೆ ಹೋಗಬಹುದೆಂದು ಡಾಕ್ಟರು ಹೇಳಿದರು. ಆದರೆ ನಾವೇನು ನಿನ್ನನ್ನು ಬೇಗ ಬಿಡುವವರಲ್ಲ. ಕನಿಷ್ಠಪಕ್ಷ ಮತ್ತೂ ಹತ್ತು ಹನ್ನೆರಡು ದಿನ ಇದ್ದು ಹೋಗಬೇಕು.... ಬರುವ ಮಾರ್ಗಶಿರದಲ್ಲಿಯೇ ನೀನು ಮದುವೆ ಮಾಡಿಕೋ; ಎಲ್ಲ ವೆಚ್ಚವನ್ನು ನಾನು ನೋಡಿಕೊಳ್ಳುತ್ತೇನೆ."

" ನಮ್ಮ ಅನ್ನಪೂರ್ಣೆಗಂತೂ ತಾಯಿ ಸಿಕ್ಕಿದ್ದಾಳೆ, ಮತ್ತೇತಕ್ಕೆ? ವಿಧವೆಯರಿಗೆ ಪುನರ್ವಿವಾಹ ಹೇಗೆ ನಿಷಿದ್ಧವೊ ವಿಧುರರಿಗೂ ಹಾಗೆಯೆ !" ಎಂದು ಗೋವರ್ಧನನು ಕಡೆಗಣ್ಣಿನಿಂದ ಹೈಮವತಿಯನ್ನು ನೋಡಿದ.

ಅವನಾಡಿದ ಮಾತಿಗೆ ವಂಶಲೋಚನರು ಸಂತುಷ್ಟರಾದರು. "ಮುತ್ತಿನಂತಹ ಮಾತು! ನಿನ್ನ ಮೇಲೆ ತಾಯಿಯ ಕೃಪೆ ಅಪಾರವಾಗಿದೆ ಗೋವರ್ಧನ! ಕಾಲೀ, ಕೃಪಾಮಯೀ, ಮಾತೆ!" ಎಂದರು.

ತನಗೆ ಬುದ್ಧಿ ಹೇಳುವ ಉದ್ದೇಶದಿಂದಲೇ ಗೋವರ್ಧನನು ಹೀಗೆ ಮಾತನಾಡಿದನೆಂದು ಬಗೆದು ಹೈಮವತಿ ಲಜ್ಜಿತೆಯಾದಳು. ಸುಮ್ಮನೆ ಹಾಲಿನಲ್ಲಿ ಸಕ್ಕರೆಯನ್ನು ಕಲಕುವ ಕೆಲಸವನ್ನು ಮುಂದುವರಿಸಿದಳು. ಗೋವರ್ಧನನ ಪತ್ನೀವ್ರತನಿಷ್ಠೆಗೆ ಮೆಚ್ಚಿ ಮುಗ್ಧರಾದ ವಂಶಲೋಚನರು, "ಇನ್ನು ಊರಿಗೆ ಹೋಗುವ ಅವಸರವೇಕೆ ? ಚೆನ್ನಾಗಿ ಗುಣಹೊಂದಿದ ಮೇಲೆಯೇ ಹೋಗು, " ಎಂದೆನ್ನುತ್ತ ಹೊರಟುನಡೆದರು.

ಹೈಮವತಿಗೆ ಖೇದವಾಯಿತು. ಗೋವರ್ಧನನು ಈಗಲೆ ಊರಿಗೆ ಹೋದರೆ, ಈ ಮೊದಲು ಮಾತಾಡಿದಂತೆ ಮಗಳನ್ನು ಇಲ್ಲಿಯೇ ಬಿಟ್ಟು ಹೋದರೆ, ತಾನು ತರಲನೊಡನೆ ಮನೆಯನ್ನು ತ್ಯಜಿಸಿ ಹೋಗುವಾಗ ಆ ಮಗುವನ್ನು ಯಾರ ಹತ್ತಿರ ಬಿಟ್ಟುಹೋಗಬೇಕೆಂಬ ಪ್ರಶ್ನೆ ಅವಳ ಮನದಲ್ಲಿ ಬಾಧಿಸುತ್ತಿತ್ತು. ಈಗಾ ಪ್ರಶ್ನೆ ಬಿಟ್ಟಂತಾಯಿತು. ತಾನು ಸುಮ್ಮನೆ ಹೊರಟು ಹೋದರಾಯಿತು, ತಂದೆ ಮಗಳನ್ನು ಕರೆದುಕೊಂಡು ಹೋಗುವರು.

ಆ ಹಗಲೆಲ್ಲಾ ಹೈಮವತಿ ಕಂಡ ಸವಿಗನಸುಗಳಿಗೆ ಎಣೆಯಿಲ್ಲ. ನಡು-ನಡುವೆ ವಿಷಾದದ ಮೋಡವೂ ಮುಸುಕುವುದು: ಬಾಲ್ಯದಿಂದಲೂ ಅಗಲದಿದ್ದ ಕಕ್ಕುಲತೆಯ ತವರುಮನೆಯನ್ನು ಚಿರಂತನವಾಗಿ ತೊರೆದು ಹೋಗಬೇಕು; ಮೊದಲೆ ದುಃಖಪೀಡಿತರಾದ ತಂದೆಗೆ ಮತ್ತಷ್ಟು ದುಃಖವಾಗುವುದು; ಮುಪ್ಪಿನ ವರಾದ ಹುಚ್ಚರಂತಾದ ಅವರನ್ನು ನೋಡಿಕೊಳ್ಳುವವರು ಯಾರು ? ಇವೆಲ್ಲ ವಿಷಯಗಳ ವೇದನೆ ಅವಳಿಗೆ ಎಷ್ಟು ಗುರುತರವಾದರೂ ಅವಳು ತರಲ ನೊಂದಿಗೆ ಹೋಗಲೇಬೇಕು, ಉಪಾಯವಿಲ್ಲ; ಈ ಚಿರವಿಯೋಗಕ್ಕೆ ತಂದೆಯೇ ಹೊಣೆಗಾರರು. ತರಲನ ಅವಿಚ್ಛಿನ್ನ ಮಿಲನದಿಂದ ಈ ವಿಯೋಗದುಃಖ ಅವಳಿಗೆ ಒಗ್ಗುವುದು. ಈ ತುಲನೆಯಲ್ಲಿ ಲಾಭದ ಪರಡಿಯೇ ಕೆಳಗಾಗಿ ಹೈಮವತಿ ಸಮಾಧಾನಗೊಂಡಳು.

ಹೊತ್ತು ಮುಳುಗುವುದಕ್ಕೆ ಕೊಂಚ ಸಮಯ ಮುಂಚೆ ಶಶಿಡಾಕ್ಟರು ಬಂದರು. ವಂಶಲೋಚನರೊಂದಿಗೆ ಅವರು ಮಾತನಾಡುತ್ತಿದ್ದುದು ಹೈಮ ವತಿಯ ಕಿವಿಗೆ ಬಿದ್ದಿತು: ಅಂದು ಬೆಳಗಿನ ಪ್ರಯಾಣಿಕರ ಗಾಡಿಯೊಡನೆ ಆಲಮಡಾಂಗಾದ ಬಳಿಯಲ್ಲಿ ಮಾಲುಗಾಡಿಯೊಂದು ಡಿಕ್ಕಿ ಹೊಡೆಯಿತು; ಬಹಳ ಅನಾಹುತ ಸಂಭವಿಸಿದೆಯಂತೆ. ಕೇಳಿ ಅವಳ ಮುಖದ ನೆತ್ತರೇ ಇಂಗಿಹೋಯಿತು. ಹತ್ತಿರವೇ ಇದ್ದ ಗಡಗಂಚಿಯನ್ನು ಹಿಡಿದುಕೊಂಡು ಹೇಗೋ ನಿಂತುಕೊಂಡಳು. ಅವಳ ಮೈಯೆಲ್ಲವೂ ಥರಥರ ನಡುಗುತ್ತಿತ್ತು. ಬಿಸಿಲೊಳಗಿಂದ ಬಂದ ಶಶಿ-ವಂಶಲೋಚನರ ಕಣ್ಣಿಗೆ ಅವಳು ಕಾಣದಿದ್ದರೂ ಒಳಗೆಯೇ ಇದ್ದ ಗೋವರ್ಧನನು ನಟ್ಟನೋಟದಿಂದ ಅವಳನ್ನೇ ನೋಡುತ್ತ ಲಿದ್ದ.

ತರಲಸು ಹೊರಟುದು ಅದೇ ಉಗಿಬಂಡಿಯಲ್ಲಿ. ಅವನ ಅವಸ್ಥೆ ಏನಾಯಿತು? ಯಾರನ್ನು ಕೇಳುವುದು! ಹೇಗೆ ಕೇಳುವುದು! ಹೈಮವತಿಯ ಮೈನಡುಕ ಕ್ಷಣಕ್ಷಣಕ್ಕೆ ಹೆಚ್ಚಿತು. ಅವಳಿನ್ನು ಬೀಳುವವಳೇ—ತಂದೆ-ಡಾಕ್ಟರ ರೆದುರಿನಲ್ಲಿ ಅವಳ ಗುಟ್ಟೆಲ್ಲ ಹೊರಬೀಳುವುದೇ. ಗೋವರ್ಧನನೆಂದ: "ತಂಗೀ, ದೀವಿಗೆ ಹಚ್ಚಮ್ಮಾ. ಅನೂ, ಇಲ್ಲಿ ಒಂದು ಲಾಟೀಸು ತೆಗೆದುಕೊಂಡು ಬಾ, ಹೋಗು."

ಆಗ ಚೇತನಗೊಂಡು ಹೈಮವತಿ ಕೋಣೆಯಿಂದ ಹೊರಬಿದ್ದಳು. ತನ್ನ ಶಿಥಿಲವಾದ ಶರೀರದ ಭಾರವನ್ನು ತಾಳಲಾರದೆ ಕಾಲುಗಳೆಲ್ಲಿ ಮುಗ್ಗರಿಸು-ವವೋ ಎಂಬಂತಾಯಿತವಳಿಗೆ. ಅಂತಿಂತು ಮನೆಯೊಳಗೆ ಹೋಗಿ ಕಂಪಿತ ಸ್ವರದಲ್ಲಿ ಅನ್ನಪೂರ್ಣೆಗೆ ಹೇಳಿದಳು: "ಅನೂ ಹೋಗಮ್ಮಾ, ದಾಸಿಯ ಕೈಯಿಂದ ಕಂದೀಲು ಹಚ್ಚಿಸಿಕೊಂಡು ಬಾ."

"ಅಮ್ಮಾ, ನಿನಗೆ ಈವೊತ್ತು ಜ್ವರ ಬಂದಿದೆಯೆ?" ಹೈಮವತಿಯ ನಡಿಗೆ ಯನ್ನು ಕಂಡು, ಸ್ವರವನ್ನು ಕೇಳಿ ಅನ್ನಪೂರ್ಣೆ ಪ್ರಶ್ನಿಸಿದಳು.

"ಹೂಂ" ಎಂದವಳೇ ಹೈಮವತಿ ತನ್ನ ಕೋಣೆಯೊಳಗೆ ಹೋಗಿ ಹಾಸಿಗೆಯಲ್ಲಿ ಬಿದ್ದು ಮುಖವನ್ನು ಮುಚ್ಚಿಕೊಂಡಳು.

ಅನ್ನಪೂರ್ಣೆ ಅವಳ ಹತ್ತಿರ ಹೋಗಿ ಕುಳಿತುಕೊಂಡು "ಅಮ್ಮಾ, ನೀರು ಬೇಕೆ? ತಲೆ ಒತ್ತಲೆ?" ಎಂದು ಕೇಳಿದಳು.

ಹೈಮವತಿಗೆ ಅಳು ಉಕ್ಕೇರಿ ಬಂದಿತು. ತಡೆಯಲಾರದೆ ಅಳಲಾರಂಭಿಸಿ ದಳು. ಅನ್ನಪೂರ್ಣೆ ಮತ್ತಷ್ಟು ಗಾಬರಿಯಿಂದ ಕಂಗಾಲಾದಳು. "ಅಮ್ಮಾ, ಬಹಳ ಸಂಕಟವಾಗುತ್ತಿದೆಯೆ? ನೆಟ್ಟಗಾಗಲಿಕ್ಕೆ ಮತ್ತೆ ಸೊಗ್ಗಕ್ಕೆ ಹೋಗು-ತ್ತೀಯಾ?" ಎಂದು ಕೇಳಿದಳು.

ಮಗುವನ್ನು ತಬ್ಬಿಕೊಂಡು ಅವಳ ತೊಡೆಯ ಮೇಲೆ ಮುಖವಿಟ್ಟು ಹೈಮವತಿ ಎಷ್ಟೋ ಹೊತ್ತು ಅತ್ತಳು. ಈವೊತ್ತು ತಾಯಿಯೊಂದಿಗೆ ಅನ್ನ-ಪೂರ್ಣೆ ಅಳಲಿಲ್ಲ. ಪ್ರವೀಣೆಯಂತೆ ಅವಳ ತಲೆಯ ಮೇಲೆ ಕೈಯಾಡಿಸುತ್ತ ನೀರವವಾಗಿ ಸಂತಯಿಸುತ್ತಿದ್ದಳು.

" ಏನಾಗಿದೆಯಮ್ಮಾ? ಮೂರೂಸಂಜೆಯ ಹೊತ್ತಿನಲ್ಲಿ ಮಲಗಿಕೊಂಡು ಬಿಟ್ಟಿ?" ಎಂದು ಕೇಳಿದಳು, ಕೋಣೆಯೊಳಗೆ ದೀವಿಗೆಯನ್ನಿಡಲು ಬಂದ ದಾಸಿ.

ಕೋಣೆಯೊಳಗೆ ಬೆಳಕು ಬರಲಾರಂಭಿಸಿದಾಗಲೇ ಹೈಮವತಿ ಅಳು-ವನ್ನು ನಿಲ್ಲಿಸಿದ್ದಳು ಅನ್ನಪೂರ್ಣೆ ದಾಸಿಗೆ ಉತ್ತರವಿತ್ತಳು: " ಅಪ್ಪನಿಗೆ ಜ್ವರ ಬಂದಿದೆ."

"ಮತ್ತೆ ಜ್ವರವೆ? ಅಡಿಗೆ ಊಟದ ಗತಿಯೇನಮ್ಮಾ?"

" ನೀನು ಒಲೆ ಹೊತ್ತಿಸು, ನಾನು ಬರುತ್ತೇನೆ," ಎಂದಳು ಹೈಮ-ವತಿ. ದಾಸಿ ಹೊರಟುಹೋದ ಮೇಲೆ ಅವಳೆದ್ದು, ಅನ್ನಪೂರ್ಣೆಯನ್ನು ತೊಡೆಯ ಮೇಲೆಳೆದುಕೊಂಡು ಮುದ್ದಾಡಿ, "ಹೋಗಮ್ಮಾ ಅನೂ, ಕೋಣೆ ಯೊಳಗೆ ಅಪ್ಪ ಒಬ್ಬರೇ ಇದ್ದಾರೆ; ಜೋಡಿಗೆ ಹೋಗು. ಅನ್ನ ಆದೊಡನೆ ಕರೆಯುತ್ತೇನೆ," ಎಂದಳು.

೯

ತರಲನು ಯಾವ ಉಗಿಬಂಡಿಯಲ್ಲಿ ಪಯಣ ಬೆಳಸಿದನೆಂಬುದು ಊರ ಜನಕ್ಕೆ ನಿಶ್ಚಿತವಾಗಿ ತಿಳಿದಿರದಿದ್ದರೂ ಅಪಘಾತಕ್ಕೀಡಾದ ಉಗಿಬಂಡಿಯಲ್ಲಿಯೆ ಅವನಿದ್ದನೆಂಬುದು ಹೈಮವತಿಗೆ ಗೊತ್ತು. ಆ ಅಪಘಾತದ ವಿಚಾರ ಅವಳ ಮನವನ್ನು ಸಂಪೂರ್ಣವಾಗಿ ಆವರಿಸಿತ್ತು. ಸತ್ತವರೆಷ್ಟೊ, ಗಾಯಹೊಂದಿ ಬಿದ್ದವರೆಷ್ಟೊ, ಉಳಿದುಕೊಂಡವರೆಷ್ಟೊ? ಈ ಮೂರು ಗುಂಪುಗಳಲ್ಲಿ ತರಲನು ಯಾವ ಗುಂಪಿಗೆ ಸೇರಿರುವನೋ! ಅವನು ಸತ್ತಿರಬಹುದೇ ಎಂದು ಯೋಚಿಸು ವಳೊಮ್ಮೆ. ಮೈ ಜುಮ್ಮೆನ್ನುವುದು. ಬಲವಾದ ಪೆಟ್ಟು ತಗಲಿ ಯಾವು-ದೊಂದು ಆಸ್ಪತ್ರೆಯಲ್ಲಿ ಬಿದ್ದುಕೊಂಡಿರಬಹುದೇ ಎಂದೊಮ್ಮೆ ಭಾವಿಸುವಳು. ಸುದೈವದಿಂದ ಸುರಕ್ಷಿತವಾಗಿ ಬದುಕಿಕೊಂಡಿದ್ದಾನು ಎಂದು ಎಂದುಕೊಳ್ಳುವ ಳೊಮ್ಮೆ. ಆಗ ಕ್ಷಣಮಾತ್ರ ಸಮಾಧಾನವೆನಿಸುವುದು. ಆದರೆ ಆ ವಿಚಾರ ಮಾತ್ರ—ತನಗಿದ್ದ ಇದೂ ಒಂದು ಅವಲಂಬನವು ತಪ್ಪಿಹೋದರೆ ಎಂಬ ಶಂಕೆ—ಅವಳನ್ನು ಬಿಟ್ಟು ತೊಲಗಲೊಲ್ಲದು. ಏನಾದರೂ ತನ್ನೊಳಗೇ ಚಿಂತಾಮಥನ. ಯಾರನ್ನೂ ವಿಚಾರಿಸುವಂತಿಲ್ಲ, ಯಾರಿಂದಲೂ ಸಾಂತ್ವನ

ಏನನ್ನು ಬಯಸುವಂತಿಲ್ಲ. ಹೊಟ್ಟೆಯೊಳಗೆ ಕಿಚ್ಚನ್ನು ತುಂಬಿಕೊಂಡೇ ಹೈಮವತಿ ಎಲ್ಲ ಕೆಲಸಗಳನ್ನು ಮಾಡಿದಳು; ಅಡಿಗೆ ಮಾಡಿ ಎಲ್ಲರಿಗೂ ಉಣಬಡಿಸಿದಳು; ತಾನು ಮಾತ್ರ ಊಟ ಮಾಡಲಿಲ್ಲ.

ಗಭೀರ ರಾತ್ರಿಯಲ್ಲಿ, ಒಂದು ನಿದ್ದೆಯಾದ ಬಳಿಕ, ವಂಶಲೋಚನರು ಜಪ ಮಾಡುವುದಕ್ಕೆ ಕಾಲೀಮಂದಿರಕ್ಕೆ ಹೋದರು. ಅವರ ದುಃಖಶಮನಕ್ಕೆ ಅದೊಂದೇ ರಾಮಬಾಣ ಔಷಧ. ಮಂದಿರದ ಬಾಗಿಲೊಳಗೆ ಬೆಳುದಿಂಗಳು ಬಿದ್ದಿತ್ತು. ಕಾಲಿಯ ಅಡಿಯಲ್ಲಿ ದೀರ್ಘದಂಡ ಪ್ರಣಾಮ ಮಾಡಿದ್ದಾಳೆ ಹೈಮವತಿ. ಆನಂದದಿಂದ ವಿಕಸಿತವಾಯಿತು ವಂಶಲೋಚನರ ಮುಖ. ಆವೇಗದಿಂದ ಕೂಗಿದರು: "ಅಮ್ಮಾ!"

ಕಳವಿಗೆ ಹೋಗಿ ಸಿಕ್ಕುಬಿದ್ದವರಂತೆ ಚಕಿತಳಾಗಿ ಎದ್ದು ನಿಂತಳು ಹೈಮವತಿ. ಮೆಟ್ಟಿಲುಗಳನ್ನೇರಿ ಹೋಗಿ ವಂಶಲೋಚನರೆಂದರು: "ಬಾರಮ್ಮಾ, ತಂದೆ ಮಗಳಿಬ್ಬರೂ ಸೇರಿ ಜಗಜ್ಜನನಿಯನ್ನು ಆರಾಧಿಸುವ."

ತಾವು ಕಾಲಿಯ ಎದುರಿನಲ್ಲಿ ಕುಳಿತುಕೊಂಡು ಮಗಳಿಗೆ ತಮ್ಮ ಹತ್ತಿರ ಕುಳಿತುಕೊಳ್ಳುವಂತೆ ಸೂಚಿಸಿದರು. ಅವಳು ಕುಳಿತುಕೊಂಡಮೇಲೆ ಸ್ತೋತ್ರ ಶ್ಲೋಕಗಳನ್ನು ಹೇಳತೊಡಗಿದರು. ತಂದೆಯಿಂದ ಪರೋಕ್ಷಭಾವನೆಯ ಸಾಂತ್ವನವನ್ನು ಹೊಂದಿ ಹೈಮವತಿಯ ಹೃದಯದ ಭಾರವು ಕೊಂಚಮಟ್ಟಿಗೆ ಕಡಿಮೆಯಾದಂತಾಯಿತು. ದೇವತೆಯ ಅಡಿಯಲ್ಲಿ ದುಃಖವನ್ನು ತೋಡಿಕೊಂಡುದರಿಂದಲೂ ಅವಳ ಮನಸು ತುಸ ಹಗುರಾಗಿತ್ತು.

ಹೀಗೆ ಒಂದೊಂದರಂತೆ ಎಷ್ಟೋ ದಿನಗಳು ಉರುಳಿದವು. ತರಲನ ಸುದ್ದಿಯೇ ಇಲ್ಲ. ಹೈಮವತಿ ಬರುಬರುತ್ತ ಗಂಭೀರೆಯಾಗತೊಡಗಿದಳು. ಅವನು ಕೊಟ್ಟುದು ಎಂಟು ದಿನಗಳ ಅವಧಿ; ಆವರೆಗಂತೂ ಪ್ರತೀಕ್ಷಿಸಲೇ ಬೇಕು. ಬಂಧಿಸಿಟ್ಟ ಶೋಕದಿಂದ ಅವಳು ತಳಮಳಿಸುತ್ತಿದ್ದಳು. ಗೋವರ್ಧನನು ಇದನ್ನು ಲಕ್ಷಿಸುತ್ತಲಿದ್ದ. ಹೈಮವತಿಯ ಚಿತ್ತವನ್ನು ಬೇರೆ ವಿಷಯದಲ್ಲಿ ತೊಡಗಿಸುವುದಕ್ಕೆಂದು, ಅವನು ತಕ್ಕಮಟ್ಟಿಗೆ ಗುಣ ಹೊಂದಿದೊಡನೆ ಅವಳಿಗೆ ಚಿತ್ರಕಲೆಯನ್ನು ಕಲಿಸಲಾರಂಭಿಸಿದ.

ಒಂದು ದಿನ ಹೈಮವತಿ ಚಿತ್ರ ಬರೆಯಲು ಕುಳಿತಿದ್ದಳು. ಆಗ ತರಲನ

ಸೋದರಮಾವನ ಮನೆಯಲ್ಲಿ ರೋದನಧ್ವನಿ ಎದ್ದಿತು. ಅವಳು ಬೆದರಿ ನಿಃಸ್ತಬ್ಧಳಾದಳು ಅವಳ ಮುಖಭಾವವನ್ನು ಕಂಡು ಗೋವರ್ಧನನು ಕೇಳಿದ: " ಯಾರ ಮನೆಯೊಳಗೆ ಅಳುತ್ತಿದ್ದಾರೆ?"

"ತರಲನ ಮನೆಯೊಳಗೆ."

"ನಾನು ಹೋಗಿ, ಏನು ಸಮಾಚಾರವೋ ಕೇಳಿ ಬರುತ್ತೇನೆ."

ಗೋವರ್ಧನನು ಮೆಲ್ಲಮೆಲ್ಲನೆ ಹೊರಡುತ್ತಿದ್ದಾಗ ವಂಶಲೋಚನರ ಆಗಮನವಾಯಿತು. ಅವರು ಹೇಳಿದರು: "ತರಲನನ್ನು ಹುಡುಕಲು ಹೋಗಿದ್ದ ಅವರ ಮಾವ ತಿರುಗಿ ಬಂದರು. ಆಲಮಡಾಂಗಾ ಸ್ಟೇಶನಿನ ಹತ್ತಿರ, ಅಪಘಾತದ ಸ್ಥಳದಲ್ಲಿ, ಗಿಡಗಂಟೆಗಳ ಜೊಂಪದೊಳಗೆ ತರಲನ ಅಂಗಿ, ಸಣ್ಣ ಟಿಪ್ಪಣಿ ಪುಸ್ತಕ ಸಿಕ್ಕವಂತೆ. ಆದರೆ ಹೆಣ ಸಿಕ್ಕಲಿಲ್ಲ. ನಾಯಿ ನರಿ ತಿಂದಿರ ಬಹುದು, ಮತ್ತೇನು! ಅಧರ್ಮ ಮಾಡದಿದ್ದರೆ ಮನುಷ್ಯನಿಗೆ ಅಪಮೃತ್ಯುವೇ ಬರುವುದಿಲ್ಲ!"

ಹೈಮವತಿ ಕುಂಚವನ್ನು ಕೆಳಗೊಗೆದವಳೇ ಮನೆಯೊಳಗೋಡಿದಳು. ನಿಶ್ಚಲವಾಗಿ ನೀರವವಾಗಿ ಕುಳಿತು ಯೋಚಿಸತೊಡಗಿದಳು. ಎಂತಹ ಭಯಂಕರ ಪೆಟ್ಟು ತಗಲಿ ದಾರುಣ ವೇದನೆಯಿಂದ ಒದ್ದಾಡಿ ತರಲನು ಪ್ರಾಣ ಬಿಟ್ಟನೊ! ರೇಲ್ವೆ ಆಳುಗಳು ಅರೆಜೀವವಿದ್ದ ದೇಹಗಳನ್ನು ಹೇಳಹೆಸರಿಲ್ಲದಂತೆ ಹುಗಿದುಬಿಡುವರೆಂದು ಕೇಳಿದ್ದೇನೆ. ತರಲನ ಗತಿಯೂ ಹಾಗಾಗಿರಬಹುದು! ಭಯದಿಂದ ವ್ಯಥೆಯಿಂದ ಅವಳ ಒಂದೊಂದು ಸ್ನಾಯುತಂತುವೂ ಕಂಪಿಸುತ್ತಿತ್ತು.

ಎತ್ತಲಿಂದಲೋ ಅನ್ನಪೂರ್ಣೆ 'ಅವ್ವಾ' ಎಂದು ಕೂಗುತ್ತ ಓಡಿಬಂದು, ಹೈಮವತಿಯನ್ನು ಆ ಸ್ಥಿತಿಯಲ್ಲಿ ಕಂಡು ಗಾಬರಿಯಾಗಿ ನಿಂತಳು. ಬಳಿಕ ಅಪ್ಪನ ಬಳಿ ಓಡಿಹೋಗಿ ಹೇಳಿದಳು: "ಅಪ್ಪಾ, ಅವ್ವ ಬಾವಾ ಆಗಿ ಕೂತಿದ್ದಾಳೆ. ನೋಡಿ ನನಗೆ ಅಂಜಿಕೆಯಾಯಿತು."

ಸಿಟ್ಟುಸಿರಿಟ್ಟು ಗೋವರ್ಧನನೆಂದ: "ಅಂಜಿಕೆ ಏಕಮ್ಮಾ? ಆಕೆ ನಿಮ್ಮ ಅವ್ವನಲ್ಲವೆ? ಆಕೆಯ ಹತ್ತಿರವೇ ಹೋಗು."

ತಂದೆಯ ಅನುರೋಧದಂತೆ, ಅವ್ವ ಈಗೇನು ಮಾಡುತ್ತಿದ್ದಾಳೋ ನೋಡುವ ಕುತೂಹಲದಿಂದ, ಅನ್ನಪೂರ್ಣೆ ಪುನಃ ಹೈಮವತಿಯ ಕೋಣೆಗೆ ಹೋದಳು. ಮೆಲ್ಲಗೆ ಒಳಗೆ ಬಗ್ಗಿ ನೋಡಿದಳು. ಹೈಮವತಿ ಕಪಾಟನ್ನು ತೆರೆದು ಒಳಗಿನ ಒಡವೆಗಳನ್ನೆಲ್ಲ ತೆಗೆಯುತ್ತಿದ್ದಳು. ಅನ್ನಪೂರ್ಣೆ ಓಡಿಹೋಗಿ ಅವಳ ಬೆನ್ನ ಮೇಲೆ ಬಿದ್ದು ಕೊರಳನ್ನು ಅವಚಿಕೊಂಡಳು. ಹೈಮವತಿ ಅವಳನ್ನು ಬೆನ್ನ ತೊಟ್ಟಿಲಲ್ಲಿ ತೂಗಾಡುತ್ತ, "ಅನೂ, ಇವೆಲ್ಲ ಆಟಿಗೆ ನಿನಗೆ, ತೆಗೆದುಕೋ," ಎಂದಳು.

ಅನ್ನಪೂರ್ಣೆ ತಾಯಿ ಸ್ವರ್ಗದಿಂದ ತಂದಿದ್ದ ಬೆಡಗಿನ ಆಟಿಗೆಗಳನ್ನು ಕನ್ನಡಿಯೊಳಗಿಂದ ನೋಡುತ್ತಿದ್ದಳು; ಅದಮ್ಯವಾದ ಆಕಾಂಕ್ಷೆಯಿಂದ, 'ಅವ್ವಾ, ಈ ಆಟಿಗೆಗಳನ್ನು ಸೊಗ್ಗದಿಂದ ನನಗಂತ ತಂದಿದ್ದೀ. ಹಾಗಾದರೆ ಇವನ್ನು ನನಗೇಕೆ ಕೊಡಲೊಲ್ಲೆ?' ಎಂದು ಕೇಳುತ್ತಿದ್ದಳು. 'ನೀನು ದೊಡ್ಡಾಕೆಯಾಗು ಮಗು; ನಿನ್ನ ಮದುವೆಯಲ್ಲಿ ನಿನಗಿವನ್ನು ಕೊಡುತ್ತೇನೆ' ಎಂದು ಹೈಮವತಿ ಹೇಳುತ್ತ ಬಂದಿದ್ದಳು. ಅನ್ನಪೂರ್ಣೆಯ ಸ್ವರ್ಗರಾಜ್ಯವಾದ ಕಪಾಟು ಈಗ ತೆರೆದಿದೆ, ಅದರಲ್ಲಿದ್ದ ಅಂದವಾದ ಆಟಿಗೆಗಳೆಲ್ಲ ಅವಳವಾಗಿವೆ! ಪ್ರಸನ್ನ ಚಿತ್ತದಿಂದ ಎರಡು ಒಳ್ಳೆಯ ಗೊಂಬೆಗಳನ್ನು ಎತ್ತಿಕೊಂಡು ಅವಳು ಅವ್ವನಿಗೆಂದಳು: "ಅವ್ವಾ, ನಾನೀಗ ದೊಡ್ಡವಳಾದೆನೇನೆ? ಇನ್ನು ನನ್ನ ಮದುವೆಯಾಗುವುದೇನೆ? ಇವನ್ನು ನೀನು ಮತ್ತೆ ತಿರುಗಿ ಇಸಿದುಕೊಳ್ಳುವುದಿಲ್ಲವೆ?"

ಮ್ಲಾನವದನದಿಂದ ಉದಾಸೀನ ಸ್ವರದಲ್ಲಿ ಹೈಮವತಿ ಹೇಳಿದಳು: "ಇಸಿದುಕೊಳ್ಳುವುದಿಲ್ಲ. ಈ ಎಲ್ಲ ಬಟ್ಟೆಬರೆ—ಇವೂ ನಿನ್ನವೇ. ನೀನು ದೊಡ್ಡವಳಾದ ಮೇಲೆ ಉಟ್ಟುಕೋ, ತೊಟ್ಟುಕೋ."

ಹೊಟ್ಟೆಯೊಳಗೆ ಹಿಡಿಸದಾದ ಆನಂದವನ್ನು ಅನ್ನಪೂರ್ಣೆ ಯಾವ ರೀತಿ ಹೊರಹೊಮ್ಮಿಸಬೇಕು! "ಅವ್ವಾ, ನಾನು ನಿನ್ನನ್ನು ಪ್ರೀತಿಮಾಡುತ್ತೇನೆ; ಇನ್ನೆಂದೂ ಪೀಡಿಸುವುದಿಲ್ಲ," ಎಂದಳು.

ಹೈಮವತಿ ಯಾವ ಮಾತನ್ನೂ ಆಡಲಿಲ್ಲ. ಅನ್ನಪೂರ್ಣೆಯನ್ನು ಎತ್ತಿಕೊಂಡು ಮುತ್ತಿಟ್ಟಳು. ಮರುಕ್ಷಣವೇ ಅವಳು ತಾಯಿಯ ತೊಡೆಯಿಂದಿ-

ಳಿದು, ಸಾಧ್ಯವಿದ್ದಷ್ಟೂ ಬಟ್ಟೆಬರೆಗಳನ್ನು, ಆಟಿಗೆಗಳನ್ನು ತಲೆಯ ಮೇಲೂ ಹೆಗಲಮೇಲೂ ಕೈಯೊಳಗೂ ತೆಗೆದುಕೊಂಡು, "ಅಪ್ಪನಿಗೆ ತೋರಿಸಿ ಬರುತ್ತೇನೆ," ಎಂದೆನ್ನುತ್ತ ಹೊರಗೆ ನಡೆದಳು.

ಹೊರಲಾರದ ಹೊರೆ ಹೊತ್ತುಕೊಂಡು ಬರುತ್ತಲಿದ್ದ ಮಗಳನ್ನು ಕಂಡು ಗೋವರ್ಧನನು, "ಇವೇನು ಮಗೂ?" ಎಂದು ಕೇಳಿದ.

"ಇವನ್ನೆಲ್ಲಾ ಅವ್ವ ನನಗೆ ಕೊಟ್ಟಳು ಅಪ್ಪಾ. ಇನ್ನೂ ಎಷ್ಟಿವೆ—ಬಹಳ! ನಾಕು, ಎಂಟು, ಇಪ್ಪತ್ತು—ಬಹಳ!"

ಗೋವರ್ಧನನ ವಿಕಸಿತವಾದ ಮುಖ ಚಿಂತೆಯಿಂದ ವ್ಯಾಕುಲವಾಯಿತು, ಗಂಭೀರವಾಯಿತು. "ಇವನ್ನು ಅವ್ವನಿಗೆ ತಿರುಗಿ ಕೊಟ್ಟುಬಿಡಮ್ಮಾ; ಹೊಲಸು ಮಾಡಬೇಡ," ಎಂದು ಹೇಳಿದ.

ತಾಯಿಯಂತೆ ತಂದೆ ತನ್ನ ಹರ್ಷವನ್ನು ಅನುಮೋದಿಸದಿದ್ದುದಕ್ಕೆ ಅನ್ನಪೂರ್ಣೆಯ ಮನಸು ಖಿನ್ನವಾಯಿತು. ಅವಳು ಎಲ್ಲವನ್ನೂ ಹೊತ್ತುಕೊಂಡು ಹೋಗಿ ಒಂದು ತೆರವಿದ್ದ ಕೋಣೆಯೊಳಗೆ ಇಟ್ಟುಕೊಂಡು ನೋಡುತ್ತ ಕುಳಿತಳು. ಬಳಿಕ ತನಗೆ ಬಂದಂತೆ ಸೀರೆಯನ್ನುಟ್ಟುಕೊಂಡು, ಕುಪ್ಪುಸವನ್ನು ತೊಟ್ಟುಕೊಂಡು, ಉಳಿದ ಬಟ್ಟೆಗಳನ್ನು ತಲೆದಿಂಬಿಗಿಟ್ಟುಕೊಂಡು, ಗೊಂಬೆಗಳನ್ನು ಮಗ್ಗುಲಲ್ಲಿಟ್ಟುಕೊಂಡು ಮಲಗಿ ನಿದ್ದೆಹೋದಳು.

## ೧೦

ಮನೆಯೆಲ್ಲವೂ ನಿಃಸ್ತಬ್ಧ. ನಡುನಡುವೆ ಗುಬ್ಬಿಗಳು ಕಿಚಿರ್‌ಮಿಚಿರ್ ಮಾಡುತ್ತಿದ್ದವು ಮಾತ್ರ. ನಿದ್ದೆಯಿಲ್ಲದವನು ಗೋವರ್ಧನನೊಬ್ಬ. ಇಂದು ಅಕಾರಣವಾಗಿಯೇ ಅವನ ಮನಸು ಉದ್ವಿಗ್ನವಾಗಿತ್ತು, ವಿಷಣ್ಣವಾಗಿತ್ತು. ಹೈಮವತಿ ತನ್ನ ಸೊತ್ತೆಲ್ಲವನ್ನೂ ಅನ್ನಪೂರ್ಣೆಗೆ ಒಪ್ಪಿಸಿದ ವೈರಾಗ್ಯವನ್ನು ಕುರಿತೇ ಆತನ ಆಲೋಚನೆ. ಆ ಮಗ್ಗುಲೊಮ್ಮೆ ಈ ಮಗ್ಗುಲೊಮ್ಮೆ ಹೊರಳಾಡಿ ಬೇಸತ್ತು ಅವನು ಎದ್ದು ಹೋಗಿ ಕಿಡಿಕಿಯ ಹತ್ತಿರ ನಿಂತುಕೊಂಡ.

ಶುಕ್ಲಪಕ್ಷದ ಚತುರ್ದಶಿ; ನಾಲ್ದೂಕಡೆ ಬೆಳ್ಳಂಬೆಳುದಿಂಗಳು ಸೂರೆ-ಯಾಗಿತ್ತು. ಬಕುಲ ವೃಕ್ಷದ ಆಚೆಯ ಮಗ್ಗುಲು ಪುಷ್ಕರಿಣಿ. ಆದರಾಚೆ ತಾಳವೃಕ್ಷಗಳ ಬನ. ಗೋವರ್ಧನನು ಅವೆಲ್ಲವನ್ನೂ ನೋಡುತ್ತಲಿದ್ದಾನೆ. ಹೈಮವತಿ ಹೊಂಡದ ಒಂದೊಂದೇ ಮೆಟ್ಟಿಲನ್ನು ನಿಂತು ನಿಂತು ಇಳಿಯ ತೊಡಗಿದಳು. ಬೆಳುದಿಂಗಳಲ್ಲಿ ಆ ಚೆಲುವಿನ ಪುತ್ತಳಿಯನ್ನು ಮುಗ್ಧನಯನ ಗಳಿಂದ ಅವನು ನೋಡುತ್ತಲಿದ್ದ.

ಅವಳು ನೀರಿನ ಹತ್ತಿರಕ್ಕೆ ಹೋದಾಗ, ಜಳಕಕ್ಕೆ ಹೋಗಿದ್ದಾಳಾ-ದೀತು, ಮೈಮೇಲಿನ ಬಟ್ಟೆಗಳನ್ನು ತೆಗೆಯಬಹುದು ಎಂದು ಬಗೆದು ಗೋವ-ರ್ಧನನು ಕಿಡಿಕಿಯಿಂದ ಬದಿಗೆ ಸರಿದು ನಿಂತುಕೊಂಡ. ಈ ರಾತ್ರಿಯ ಚಳಿ ಯೊಳಗೆ ಸ್ನಾನ ಮಾಡುವುದಕ್ಕೆ ಕಾರಣವೇನೆಂದು ಅವನಿಗೆ ಹೊಳೆಯಲಿಲ್ಲ. ಆಗವನು ಮತ್ತೆ ಕಿಡಿಕಿಯ ಹತ್ತಿರ ಹೋಗಿ ನಿಂತ. ಹೈಮವತಿ ಕಂಟಮುಟ್ಟ ನೀರಿನಲ್ಲಿ ಇಳಿದಿದ್ದಳು. ಕ್ಷೀರಸಾಗರದ ಹೃದಯದಲ್ಲಿ ಅರಳಿರುವ ತಾವರೆ ಯಂತೆ ನೀರ ಮೇಲೆ ಅವಳ ಅಂದವಾದ ಮೊಗ. ನೋಡುನೋಡುತ್ತಿದ್ದಂತೆ ಅದು ಅದೃಶ್ಯವಾಗಿ ಕೊಳದ ಅಲೆಗಳು ಚಂದ್ರಬಿಂಬವನ್ನು ಅಲುಗಾಡಿಸ ಲಾರಂಭಿಸಿದವು.

ಭಯವು ಗೋವರ್ಧನನ ಹೃದಯವನ್ನು ಉದ್ವಿಗ್ನಗೊಳಿಸಿತು. ಸಲಾಕೆ ಗಳು ಕಿತ್ತುಹೋಗಿದ್ದ ಕಿಡಿಕಿಯೊಳಗಿಂದ ತೂರಿಕೊಂಡು ಹೊರಕ್ಕೆ ನೆಗೆದು ಓಡಿದ. ಅಷ್ಟರಲ್ಲಿ ಹೈಮವತಿಯ ಶರೀರವು ಒಮ್ಮೆ ಮೇಲೆದ್ದು ಮತ್ತೆ ಮುಳು-ಗಿತ್ತು. ಅವನು ಟಣ್ಣನೆ ಕೊಳದೊಳಗೆ ಹಾರಿದ.

"ತಂಗೀ!" ಹೈಮವತಿಯನ್ನು ನೀರಿನಿಂದ ಮೇಲೆತ್ತಿ ತಂದು ಮಲಗಿಸಿ ಗೋವರ್ಧನನು ಕೂಗಿದ.

ಅವಳಿಗಿನ್ನೂ ಎಚ್ಚರುದಪ್ಪಿರಲಿಲ್ಲ. ಸರಕ್ಕನೆ ಎದ್ದು ಕುಳಿತು ತೊಯ್ದ ಸೆರಗನ್ನು ತಲೆಯ ಮೇಲೆ ಎಳೆದುಕೊಂಡಳು. ಶೋಕ-ಶೀತಗಳಿಂದ, ಲಜ್ಜೆ-ಚಿಂತೆಗಳಿಂದ ಅವಳು ಗದಗದ ನಡುಗುತ್ತಿದ್ದಳು.

"ಇಂಥ ನಿಷ್ಠುರ ಕೆಲಸ ಮಾಡಲಿಕ್ಕೆ ನಿನಗೆ ಬಂದ ಅಂಥ ಕಷ್ಟ-ವಾದರೂ ಏನಮ್ಮಾ?"

ಹೈಮವತಿ ಮಾತನಾಡಲಿಲ್ಲ. ಶೋಕವು ಒತ್ತಿಬಂದು ಬಿಕ್ಕಿಬಿಕ್ಕಿ ಅಳತೊಡಗಿದಳು.

“ತರಲನನ್ನು ನೀನು ಇಷ್ಟು ಪ್ರೀತಿಸುವೆಯಾ?” ಸ್ನೇಹಭರಿತವಾದ ಕೋಮಲಸ್ವರದಿಂದ ಗೋವರ್ಧನನು ಪುನಃ ಪ್ರಶ್ನಿಸಿದ.

ಶೋಕದಿಂದ ಗದ್ಗದವಾದ ಸ್ವರದಲ್ಲಿ ಹೈಮವತಿ ಉತ್ತರವಿತ್ತಳು: “ಅವನು ನನ್ನ ಪತಿ—ಚಿಕ್ಕಂದಿನಿಂದಲೂ ಜೊತೆಗಾರ—ಅವನೇ ನನ್ನ ಸರ್ವಸ್ವ!”

ವಿಧವೆಯ ಬಾಯಿಯಲ್ಲಿ ಈ ಮಾತು ! ಗೋವರ್ಧನನಿಗೆ ಬಹಳ ಕೆಟ್ಟೆನಿಸಿತು. ಆದರೂ ಶೋಕಾರ್ತೆಯನ್ನು ಸಮಾಧಾನಪಡಿಸುವುದಕ್ಕಾಗಿ ಅವನೆಂದ: “ಆದರೆ ನೀನು ಸತ್ತರೆ ಅವನು ತಿರುಗಿ ಬರುವನೆ?”

“ಬರುವುದಿಲ್ಲವೆಂತಲೆ ಸಾಯಬೇಕೆಂದಿದ್ದೆ. ಆದರೆ ವಿಧಿ ಅಡ್ಡ ಬಂದಿತು. ಈ ಲಜ್ಜಾಭಾರವನ್ನು ಹೊತ್ತುಕೊಂಡು ನಾನು ಬದುಕಿರುವುದೆಂತು ? ಸತ್ತು ಅವನ ಹತ್ತಿರ ಸೇರಿದರೆ ನನ್ನ ಲಜ್ಜೆ ಮುಚ್ಚುವುದು”

“ಇದರಲ್ಲಿ ಲಜ್ಜೆ ಏತರದು ? ತರಲನನ್ನು ನೀನು ಪ್ರೀತಿಸುವೆಯೆಂದು ಯಾರೂ ಅರಿಯರು. ನನಗೆ ತಿಳಿದಿದ್ದರೂ ನಾಳೆಯೆಂದರೆ ನಾಳೆಯೆ ಹೊರಟು ಹೋಗುವವನು. ನಾನು ಯಾರೆದುರಿಗೂ ಈ ವಿಷಯವಾಗಿ ಪಿಟ್ಟೆನ್ನುವುದಿಲ್ಲ.”

ಎರಡು ಕೈಗಳಿಂದಲೂ ಮೋರೆಯನ್ನು ಮುಚ್ಚಿಕೊಂಡು ಹೈಮವತಿ ಬಿಕ್ಕಿ ಬಿಕ್ಕಿ ಅತ್ತಳು. “ನಾನು ಬದುಕಿದ್ದರೆ ಎಲ್ಲರಿಗೂ ಗೊತ್ತಾಗುವುದು—ಮುಚ್ಚಿಡುವುದಕ್ಕೆ ಉಪಾಯವಿಲ್ಲ,” ಎಂದು ನುಡಿದಳು.

ಗೋವರ್ಧನನ ಮೈಗೆ ವಿದ್ಯುತ್ತು ತಾಗಿದಂತಾಯಿತು. ಮನಸಿನೊಳಗೆ ತಿರಸ್ಕಾರವುಂಟಾಯಿತು. ಕೊಂಚ ಸಮಯ ಸುಮ್ಮನಿದ್ದು ಕೇಳಿದ: “ತರಲನು ಒಂದು ವೇಳೆ ಬದುಕಿದ್ದರಾದರೂ ಅದು ಹೇಗೆ ಮುಚ್ಚುತ್ತಿತ್ತು?”

“ಏನೇ ಆದರೂ, ಯಾರು ಏನಾಡಿದರೂ ಅವನು ನನ್ನನ್ನು ಮದುವೆ ಯಾಗದೆ ಇರುತ್ತಿರಲಿಲ್ಲ.”

ಈ ಸಮಸ್ಯೆ ಗೋವರ್ಧನನಿಗೆ ಅತ್ಯಂತ ಕಠಿನವಾಯಿತು. ಹೇಳಬೇಕಾದ ಉತ್ತರವಾಗಲಿ ಸಮಾಧಾನದ ಮಾತಾಗಲಿ ಅವನಿಗೆ ತೋಚದಾಯಿತು. ಈ ವಿಧವೆಯ ಮಾನವನ್ನು ಮುಚ್ಚುವಂತಹದು ಮೃತ್ಯು-

ವೊಂದೆಯೆ? ಒಮ್ಮೆಲೆ ಪ್ರಪಂಚದಿಂದ ಎರಡು ಜೀವಿಗಳ ಅಂತರ್ಧಾನವೆ? ಅವನ ಮೈಮೇಲೆ ಮುಳ್ಳುಗಳೆದ್ದವು. "ನೀನೀಗ ಒಳಗೆ ನಡೆಯಮ್ಮಾ. ನನಗೆ ವಿಚಾರ ಮಾಡುವುದಕ್ಕೆ ಒಂದು ದಿನ ಅವಕಾಶ ಕೊಡು. ಏನಾದರೂ ಉಪಾಯವಿದೆಯೇನೋ ಹುಡುಕುತ್ತೇನೆ. ನಿನ್ನಿಂದ ನಡೆಯುವುದಕ್ಕಾಗು-ತ್ತದೆಯೆ ಅಥವಾ ಹಿಡಿಯಲಿ? " ಎಂದ.

ಹೈಮವತಿ ಎದ್ದು ಜೋಲುಗಾಲುಗಳನ್ನು ಎಳೆದೆಳೆದು ಮುಂದಿಡುತ್ತ ನಡೆದು, ಕಿಡಿಕಿಯ ಮಾರ್ಗವಾಗಿ ಮನೆಯನ್ನು ಸೇರಿದಳು. "ಈವೊತ್ತು ರಾತ್ರಿಯೊಳಗೆ ಮತ್ತೆ ಇಂತಹ ಪ್ರಯತ್ನ ಮಾಡುವುದಿಲ್ಲವೆಂದು ನನ್ನ ಮುಂದೆ ಆಣೆ ಮಾಡಿ ಹೋಗು ತಂಗೀ," ಎಂದ ಗೋವರ್ಧನ.

ಅವನತವಾದ ಮುಖವನ್ನು ಎತ್ತದೆ ಹೈಮವತಿ ಆಶ್ವಾಸನವಿತ್ತಳು: "ಮಾಡುವುದಿಲ್ಲ."

ಅವಳು ನೋಟದಿಂದ ಮರೆಯಾಗುವ ವರೆಗೂ ನೋಡುತ್ತ ವಿಚಾರ-ಮಗ್ನನಾಗಿ ನಿಂತಿದ್ದು, ಆಮೇಲೆ ನಿಟ್ಟುಸಿರಿಟ್ಟು, ಬಟ್ಟೆಗಳನ್ನು ಬದಲಿಸಿ ಗೋವರ್ಧನನು ಮಲಗಿಕೊಂಡ ಹೈಮವತಿಯಿಂದ ಆಣೆ ಮಾಡಿಸಿದ್ದರೂ ಅವನಿಗೆ ನಿದ್ದೆ ಮಾಡಲು ಸಾಹಸವಾಗಲಿಲ್ಲ. ವಿಚಾರಗಳ ಆಂದೋಲನದಲ್ಲಿ ನಿದ್ದೆ ಹತ್ತುವುದೂ ಶಕ್ಯವಿರಲಿಲ್ಲ. ಕಿಡಿಕಿಯಲ್ಲಿ ಹೋಗಿ ಕುಳಿತುಕೊಂಡ. ಕೊಳದ ಮೇಲೆ ಅವನ ಕಣ್ಣುಗಳ ಕಾವಲು, ಮನೆಯಲ್ಲಿ ಅವನ ಕಿವಿಗಳ ಕಾವಲು. ನಸುಕು ಹರಿದರೂ ವಿಚಾರಸಾಗರದ ದಡವನ್ನು ಕಾಣದೆ ಅವನು ಪರಿವೆಗೆಟ್ಟು ಕುಳಿತಿದ್ದ.

"ಅಪ್ಪಾ," ಗೋವರ್ಧನನ ಮೈಮೇಲೆ ಬಿದ್ದು ಅನ್ನಪೂರ್ಣೆ ಕೂಗಿದಳು. ಗೋವರ್ಧನನು ಬೆಚ್ಚಿಬಿದ್ದು ತಿರುಗಿ ನೋಡಿದ. ತಾಯ್ತಂದೆಯರುಳನ್ನು ಮರಳಿ ಪಡೆದ ಆನಂದದ ದನಿಯಲ್ಲಿ ಅನ್ನಪೂರ್ಣೆಯೆಂದಳು: "ಅಪ್ಪಾ, ನೀನು ಈಗ ಎದ್ದೆ ಕಾಣುತ್ತದೆ? ಅವ್ವ, ನಾನು ಎದ್ದು ಎಷ್ಟು ಹೊತ್ತಾಯಿತು ಆಗಳೇ!"

"ನಿಮ್ಮವ್ವ ಏನು ಮಾಡುತ್ತಿದ್ದಾಳೆ?"

"ಹೂ ತೆಗೆದು ಪೂಜೆಗೆ ಹಾಕಿಡುತ್ತಿದ್ದಾಳೆ."

“ ನಾನೀಗಲೇ ಊರಿಗೆ ಹೋಗಬೇಕು ಅನೂ. ನೀನು ನಿಮ್ಮವ್ವನನ್ನು ಬಿಟ್ಟು ಬರಬೇಕಾಗುತ್ತದೆ.”

“ ಅವ್ವನನ್ನು ಕರೆದುಕೊಂಡು ಹೋಗೋಣ ಅಪ್ಪಾ. ಆಕೆಗೀಗ ಪೂರಾ ನೆಟ್ಟಗಾಗಿದೆ. ತಣ್ಣೀರು ಸ್ನಾನ ಮಾಡುತ್ತಾಳೆ, ಊಟಮಾಡುತ್ತಾಳೆ, ಹುಣಿಸೆ-ಕಾಯಿ ತಿನ್ನುತ್ತಾಳೆ....”

ಅನ್ಯಮನಸ್ಕನಂತೆ ಗೋವರ್ಧನನು ಹೇಳಿದ: “ಹೂಂ.”

ಅನ್ನಪೂರ್ಣೆ ಒಳಗಡೆ ಓಡಿದಳು. ಸಂತೋಷದಿಂದ ಗಟ್ಟಿಯಾಗಿ ಒದೆ-ರೊದರಿ ಹೇಳಿದಳು: “ ನಾನು ಅಪ್ಪನಿಗೆ ಹೇಳಿದೆ—ನೀನು ತಣ್ಣೀರು ಸ್ನಾನ ಮಾಡುತ್ತೀ, ಹುಣಿಸೆಕಾಯಿ ತಿನ್ನುತ್ತೀ, ನಿನ್ನ ಜಡ್ಡು ಗಿಡ್ಡು ಎಲ್ಲಾ ಸುಳ್ಳು. ಈಗ ಅಪ್ಪ ನಿನ್ನನ್ನು ಊರಿಗೆ ಕರೆದುಕೊಂಡು ಹೋಗುತ್ತಾನೆ. ಹೇಗಾಯಿತು!”

## ೧೧

ಮುಂಜಾನೆ ಗೋವರ್ಧನನು ಹೃದಯನಿವೇದನೆಗಾಗಿ ಕಾಲೀಮಂದಿ-ರಕ್ಕೆ ಹೋದ. ಮೆಟ್ಟಿಲು ಹತ್ತಿದೊಡನೆಯೆ ಅವನ ದೃಷ್ಟಿ ಮೂರ್ತಿಯ ಹಿನ್ನೆಲೆಯಲ್ಲಿ ಬರೆದಿದ್ದ ಚಿತ್ರದ ಮೇಲೆ ಬಿದ್ದಿತು. ಹೈಮವತಿ ಅನ್ನಪೂರ್ಣೆಯರ ಪ್ರತಿರೂಪಗಳೇ ಪಾರ್ವತಿ ಲಕ್ಷ್ಮಿಯರು. ಉದಾಸೀನ ಸಂನ್ಯಾಸಿ ಶಿವ. ಆ ಚಿತ್ರವನ್ನವನು ವ್ಯಕ್ತಚೇತನದಿಂದ ತೆಗೆದಿರಲಿಲ್ಲ; ದಿನಾಲು ನೋಡುತ್ತಿ-ದ್ದಾಗ ಚಿತ್ರ ಈ ಬಗೆಯಾಗಿ ಕಂಡಿರಲೂ ಇಲ್ಲ ಅವನಿಗೆ. ಸಮಸ್ಯೆಯ ಉತ್ತರವನ್ನು ಕೇಳಿಕೊಳ್ಳಲೆಂದು ಬಂದರೆ ಇದೇನು ಸೂಚನೆ! ಮಗುವಿನ ಬಾಯಿ-ಯಲ್ಲಿಯೂ ಇದೇ, ತನ್ನ ಮನಸಿನ ಪ್ರತಿಬಿಂಬವೂ ಇದೇ; ಮಾತೆಯ ನಿರ್ದೇಶವೂ ಇದೇ ಇದ್ದಿರಬಹುದೆ?—ಗೋವರ್ಧನನು ಗುಡಿಯೊಳಗೆ ಹೋಗಿ ದೇವಿಗೆ ನಮಸ್ಕರಿಸುವುದನ್ನು ಮರೆತು, ನಟ್ಟನೋಟದಿಂದ ಕಾಲೀಮೂರ್ತಿಯನ್ನು ನೋಡುತ್ತ ಮೆಟ್ಟಿಲ ಹತ್ತಿರವೇ ಕೈಜೋಡಿಸಿಕೊಂಡು ನಿಂತ.

ಆಗ ವಂಶಲೋಚನರು ಬಂದು ಅವನನ್ನು ಕಂಡು, “ ಈಗ ಕೋಣೆಯಿಂದ ಹೊರಬೀಳುವಂತಾದೆಯಾ ಗೋವರ್ಧನ ? ಇದೆಲ್ಲವೂ ತಾಯಿಯ ಲೀಲೆ....”

ಗೋವರ್ಧನನ ಮನಃಸ್ಥಿತಿ ಅವರೊಡನೆ ಮಾತನಾಡುವಂತಿರಲಿಲ್ಲ. ಅವನು ನೀರವವಾಗಿ ಮೆಲ್ಲಮೆಲ್ಲನೆ ಹೊರಟುಹೋದ. ಹೆರವರ ಮನೆಯ ಜೊಂಜಾಟದಲ್ಲಿ ತಾನು ಬೀಳುವ ಅಗತ್ಯವೇನು ? ಮಗುವನ್ನು ಕರೆದುಕೊಂಡು ಇಂದೇ ಊರಿಗೆ ಹೊರಟುಹೋದರೆ ಯಾವ ಕಷ್ಟವೂ ಇಲ್ಲ—ಎಂದೊಮ್ಮೆ ಅವನು ಯೋಚಿಸುವ. ಮರುಕ್ಷಣದಲ್ಲಿ ಸ್ವಾರ್ಥಪರವಾದ ಈ ವಿಚಾರವನ್ನು ಧಿಕ್ಕರಿಸುವ. ತಾನು ಸಾಯಲಾಗಿ ಬಿದ್ದುಕೊಂಡಾಗ ಪರಿಪರಿಯಿಂದ ಜೋಪಾನ ಮಾಡಿದ ಹೈಮವತಿಯನ್ನು ವಿಪತ್ಕಾಲದಲ್ಲಿ ಬಿಟ್ಟು ಓಡುವುದೇ? ಆದರೆ ತಾನು ಸಂಕಟಕ್ಕೀಡಾದುದು ತನ್ನ ತಪ್ಪಿನಿಂದಲೋ ಅಥವಾ ಹೈಮವತಿಗಾಗಿಯೋ? ಅವಳನ್ನು ಬದುಕಿಸುವುದಕ್ಕಾಗಿ ತಾನು ಮೂಳೆ ಮುರಿದುಕೊಂಡ, ಅದಕ್ಕೆ ಅವಳು ಉಪಚಾರ ಮಾಡಿದಳು, ಇದರಲ್ಲಿ ಅವಳ ಉಪಕಾರವೇನು?....ತನ್ನ ಅವಳ ಸಂಬಂಧವು ಕೇವಲ ಉಪಕಾರೀ ಉಪಕೃತ ಸಂಬಂಧವೇ? ಇಪ್ಪಿದ್ದಾಗಿನಿಂದಲೂ ತಾನು ಅವಳನ್ನು ನೋಡುತ್ತ ಬಂದಿದ್ದಾನೆ, ತನ್ನೆದುರಿನಲ್ಲಿಯೇ ಅವಳ ಮದುವೆಯಾಯಿತು, ವಿಧವೆಯೂ ಆದಳು, ಅವಳಲ್ಲಿ ವರುಷವರುಷವೂ ಮೈಗೂಡುತ್ತ ಬಂದಿದ್ದ ಯೌವನಲಾವಣ್ಯವು ತನ್ನನ್ನು ಮುಗ್ಧಗೊಳಿಸುತ್ತಲಿದೆ, ಅವಳೊಡನೆ ಆತ್ಮೀಯ ಆಂತರಿಕ ಆಕರ್ಷಣೆಯಿಂದ ತನ್ನ ಸಂಬಂಧ ಬೆಳೆದಿದೆ—ಇಷ್ಟೆಲ್ಲಾ ಇರುವಾಗ ಅವಳನ್ನು ಸಂಕಟಸಮಯದಲ್ಲಿ ಕೈಬಿಟ್ಟು ಪಲಾಯನ ಮಂತ್ರ ಹೇಳುವುದು ಮನುಷ್ಯತ್ವವೇ? ಆದರೆ ಪ್ರವೃತ್ತಿಗೆ ಅಧೀನರಾಗಿ ಮಾಡಿದ ಕುಕರ್ಮದ ಫಲವನ್ನು ಮಾನವರು ಅನುಭವಿಸಲೇಬೇಕು, ಆದರಿಂದ ಅವರನ್ನು ಉಳಿಸಿಕೊಳ್ಳುವುದೂ ಪಾಪ. ವಿಧವೆ ಅನಾಚಾರದಿಂದ ಮೈಮೇಲೆ ಹಾಕಿಕೊಂಡ ವಿಪತ್ತಿನಿಂದ ಅವಳನ್ನು ರಕ್ಷಿಸುವ ಪ್ರಯತ್ನಗಳೆಲ್ಲವೂ ಪಾಪಮಯ. ಪಾಪವನ್ನು ಪಾಪದಿಂದ ಮುಚ್ಚುವುದರಿಂದ ಏನು ಪ್ರಯೋಜನ?....ಇದ್ದ ಸಂಗತಿಯನ್ನು ವಂಶಲೋಚನರಿಗೆ ತಿಳಿಸಿದರೆ, ಅವರು ಇದಕ್ಕೆ ಉಪಾಯವನ್ನು ಹುಡುಕರೇನು? ಆದರೆ ಹಾಗೆ ಮಾಡುವುದರಿಂದ ತಂದೆಮಕ್ಕಳಿಬ್ಬರ ದುಃಖವನ್ನೂ ಲಜ್ಜೆಯನ್ನೂ ಹೆಚ್ಚಿಸಿದಂತಾದೀತೇ ವಿನಾ ಬೇರೆಯಿಲ್ಲ. ಹಾಗಾದರೆ ಏನು? ಹೇಗೆ?—ಇಡೀ ದಿನ ಗೋವರ್ಧನನ ಅಂತರಂಗದಲ್ಲಿ ಇದೇ ದ್ವಂದ್ವ; ಇದಕ್ಕೆ ಕೊನೆಯಿಲ್ಲ.

ದುಃಖದಿಂದಲೂ ಚಿಂತೆಯಿಂದಲೂ ಹೈಮವತಿಯ ಮೋರೆ ಕಂದಿ

ಕಪ್ಪಿಟ್ಟಿದ್ದಿತು. ಅಂದು ನಿಃಸಂಕೋಚವಾಗಿ ಯಾರೆದುರಿಗೆ ಅಡ್ಡಾಡುವುದಕ್ಕೂ ಅವಳಿಂದಾಗಲಿಲ್ಲ. ಮಾತನಾಡುವ ಶಕ್ತಿಯಂತೂ ಅವಳಲ್ಲಿ ಉಳಿದಿರಲಿಲ್ಲ ಹೆಚ್ಚಾಗಿ, ತನ್ನ ಗುಟ್ಟನ್ನರಿತ ಗೋವರ್ಧನನ ಹತ್ತಿರಕ್ಕೆ ಹೋಗಲು ಅವಳ ಮನಸು ಜಕ್ಕನೆ ಜರಿದುಕೊಳ್ಳುತ್ತಿತ್ತು. ಅವನ ಅಗತ್ಯಗಳನ್ನೆಲ್ಲ ಅನ್ನಪೂರ್ಣೆಯ ಮುಖಾಂತರವೊ ದಾಸಿಯ ಮುಖಾಂತರವೊ ಅವಳು ಒದವಿಸುತ್ತಲಿದ್ದಳು. ಇಡೀ ದಿನ ಹೈಮವತಿ ಮೋರೆ ತಪ್ಪಿಸಿಕೊಂಡು ಇರುತ್ತಿದ್ದುದರಿಂದ ಗೋವರ್ಧನನ ಮನಸಿನಲ್ಲಿ ಅವಳ ಮೂರ್ತಿ, ಅವಳ ಮಾತುಗಳೇ ಹೆಚ್ಚು ಹೆಚ್ಚು ಸಿಚ್ಛಳವಾಗಿ ನೆಲೆಸುತ್ತಿದ್ದವು. ದಿನಕ್ಕೆ ನೂರೆಂಟು ಬಾರಿ ಬಂದು ನಲುಮೆಯ ನಗೆಯಿಂದ ಸೊಗಸುಗೊಳಿಸುತ್ತಿದ್ದವಳು ಒಮ್ಮೆಕೂಡ ಬರಬಾರದೆಂದರೆ ಅದೆಂತಹ ಕೊರತೆ, ಅದೆಂತಹ ಕೊರತೆ! ಅವನ ಅಂತರಂಗವು ದೇವರಿಲ್ಲದ ಗುಡಿಯಂತಾಯಿತು.

ರಾತ್ರಿ ಊಟಕ್ಕೆ ಕುಳಿತಾಗ ಗೋವರ್ಧನನು ಅನ್ನಪೂರ್ಣೆಯನ್ನು ವಿಚಾರಿಸಿದ: "ನಿಮ್ಮಪ್ಪ ಎಲ್ಲಿ ಅನೂ?"

"ಅಡಿಗೆಮನೆಯೊಳಗೆ."

ಸ್ವಲ್ಪ ವಿಚಾರಮಾಡಿ ಗೋವರ್ಧನನೆಂದ: "ಇನ್ನೊಂದು ಸೌಟು ಸಾರು ತಂದುಹಾಕಲು ಹೇಳು, ನಿಮ್ಮವ್ವನಿಗೆ."

ಗತ್ಯಂತರವಿಲ್ಲದೆ, ಲಜ್ಜೆಯ ಸಂಕೋಚದಿಂದ ಕುಂಠಿತಗತಿಯಿಂದ ಮೋರೆ ತಗ್ಗಿಸಿಕೊಂಡು —ಆದರೂ ಗೋವರ್ಧನನ ತೀರ ಸಮೀಪಕ್ಕೆ— ಬರಬೇಕಾಯಿತು ಹೈಮವತಿ.

"ತಂಗೀ, ಒಂದು ಉಪಾಯ ಹೊಳೆದಿದೆ; ಎಲೆ-ಅಡಕೆ ಕೊಡಲಿಕ್ಕೆ ಬಂದಾಗ ಹೇಳುತ್ತೇನೆ." ಅವಳು ಬಗ್ಗಿ ಬಡಿಸುತ್ತಿದ್ದಾಗ ಗೋವರ್ಧನನು ಮೆಲ್ಲಗೆ ಉಸುರಿದ.

ಹೈಮವತಿಯ ಕೈನಡುಗಿತು; ಕೊಂಚ ಸಾರು ನೆಲದ ಮೇಲೆ ಚೆಲ್ಲಿತು.

ಗೋವರ್ಧನನು ಉಂಡು ಕೈತೊಳೆದುಕೊಂಡು ತನ್ನ ಕೋಣೆಗೆ ಹೋದ. ಆದರೆ ಅವನಿಗಾಗಿ ಎಲೆ-ಅಡಕೆ ಒಯ್ಯುವುದು ಹೈಮವತಿಗೆ ಆಗಲೊಲ್ಲದು. ಒದಗಿದ ಸಂಕಟದಿಂದ ಪಾರಾಗುವ ಹಂಚಿಕೆಯನ್ನು ತಿಳಿದುಕೊಳ್ಳಬೇಕೆಂಬ ಆಸೆ ಅವಳನ್ನು ಮುಂದಕ್ಕೆ ನೂಕುವುದು, ಲಜ್ಜೆ ಹಿಂದಕ್ಕೆ ಜಗ್ಗುವುದು. ಕೊನೆ

ಗೊಮ್ಮೆ ಒಂದೊಂದೇ ಹೆಜ್ಜೆಯನ್ನು ಕಿತ್ತುಕಿತ್ತಿಡುತ್ತ, ತಾಂಬೂಲ ತಟ್ಟೆಯನ್ನು ಹಿಡಿದುಕೊಂಡು ಅವನ ಕೋಣೆಯ ಬಾಗಿಲ ವರೆಗೆ ಹೋದಳು; ಕೊಂಚ ಹೊತ್ತು ಅಲ್ಲಿಯೇ ನಿಂತುಕೊಂಡು ಹಿಂದಿರುಗಿ ಮನೆಯೊಳಗೆ ಬಂದು ಬಿಟ್ಟಳು.

"ದಾಸೀ, ಏನು ಮಾಡುತ್ತಿದ್ದೀ? ಅನುವಿನ ತಂದೆಗೆ ತಾಂಬೂಲ ಕೊಟ್ಟು ಬಾ," ಎಂದು ತೊತ್ತಿಗೆ ಹೇಳಿದಳು.

ದಾಸಿ ಊಟಕ್ಕೆ ಕುಳಿತಿದ್ದಳು. ದೊಡ್ಡದೊಂದು ತುತ್ತನ್ನು ಬಾಯೊಳಗೆ ತುಂಬಿಕೊಂಡು, ನುರಿಸುವುದಕ್ಕೆ ಇಂಬಿಲ್ಲದೆ ಪೇಚಾಡುತ್ತಿದ್ದಳು. ಜಡಿದು ತುಂಬಿದ ಆ ಬಾಯ ಬಿಲದಿಂದ ಏನೋ ಒಂದು ಶಬ್ದ ಹೊರಟಿತು. ಅದರ ಭಾವಾರ್ಥವಿಷ್ಟೇ- ಊಟಕ್ಕೆ ಕುಳಿತಿದ್ದೇನೆ, ನೀನೇ ಒಯ್ದು ಕೊಡಲಾರೆಯಾ?

ಹೈಮವತಿ ಅನ್ನಪೂರ್ಣೆಯನ್ನು ಹುಡುಕಿದಳು. ಅವಳಿಗಾಗಲೇ ತುಂಬ ನಿದ್ದೆ. ಉಪಾಯಗಾಣದೆ ಎಲೆಅಡಕೆಯ ತಟ್ಟೆಯನ್ನು ಪುನಃ ತಾನೇ ಒಯ್ದಳು. ಈ ಸಲ ಕೋಣೆಯ ಹೊಸತಿಲನ್ನು ದಾಟಿದಳು. ಮುಂದುವರಿಯಲು ಕಾಲುಗಳು ಏಳದಾದವು. ಮತ್ತೆ ಹಿಂದಿರುಗುವವಳು. ಆದರೆ ನೆಳಲು ಬಿದ್ದುದನ್ನು ಕಂಡು ಗೋವರ್ಧನನೇ ಮಾತನಾಡಿದ: "ಬಾ, ಹೇಳುತ್ತೇನೆ."

ಈ ಕರೆಯ ಎಳೆತಕ್ಕೆ ಹೈಮವತಿ ಸಿಲುಕಿದಳು. ಅವಳು ಮುಂದುವರಿದು ಹೋಗಿ ಗೋವರ್ಧನನ ಹಾಸಿಗೆಯ ಮೇಲೆ ತಟ್ಟೆಯನ್ನಿರಿಸಿ ನಿಂತುಕೊಂಡಳು. ಅವಳ ನೋಟವು ಮಾತ್ರ ನೆಲ ಬಿಟ್ಟು ಕೀಳಲಿಲ್ಲ. ಗೋವರ್ಧನನು ಅವಳ ಹತ್ತಿರಕ್ಕೆ ಸರಿದು ಮೃದುಸ್ವರದಿಂದ ನುಡಿದ: "ನಿನ್ನ ಮದುವೆ ಮಾಡಿದ ಹೊರತು ಮತ್ತೊಂದು ಉಪಾಯವಿಲ್ಲವೆಂದು ನನಗೆ ತೋರುತ್ತದೆ."

ಹೈಮವತಿಯ ಸಂಕೋಚವು ಈಗ ತೊಲಗಿತು. ತಲೆಯೆತ್ತಿ ನೀಟಾಗಿ ನಿಂತುಕೊಂಡು ದೃಢಸ್ವರದಿಂದ ಅವಳು ಮಾತನಾಡಿದಳು. "ಸಾಧ್ಯವಿಲ್ಲ. ಒಬ್ಬನನ್ನು ಹೊರತು ಬೇರೆ ಯಾರನ್ನೂ ನಾನು ಪತಿಯೆಂದು ವರಿಸುವುದು ಸಾಧ್ಯವಿಲ್ಲ. ಇದಕ್ಕಿಂತ ಮರಣವೇ ಲೇಸು."

ಮನವನ್ನಾವರಿಸುತ್ತಿದ್ದ ಸಂಕೋಚವನ್ನು ಬಲಪೂರ್ವಕವಾಗಿ ತಳ್ಳಿ ಗೋವರ್ಧನನೆಂದ: "ನೀನು ಸತ್ತರೆ ಆತ್ಮಹತ್ಯೆಯಾಗುವುದು, ಜೊತೆಗೆ

ಭ್ರೂಣಹತ್ಯೆಯೂ ಆಗುವುದು ಅಂತೂ ಪಾಪ ದ್ವಿಗುಣಿತವಾಗುವುದಿಲ್ಲವೆ ? ನಿನ್ನನ್ನು ಹೆಸರಿಗೆ ಮಾತ್ರ ಹೆಂಡತಿಯೆಂದು ಅಂಗೀಕರಿಸಿ, ನಿನ್ನ ಸಂತಾನಕ್ಕೆ ಮಾತ್ರ ಅಧಿಕೃತ ತಂದೆಯಾಗಲು ಯಾರಾದರೂ ಒಪ್ಪುತ್ತಿದ್ದರೆ, ಅವನನ್ನು ನೀನು ಮದುವೆಯಾಗಲಿಕ್ಕೆ ಅಡ್ಡಿಯೇನು ?"

ಈ ಮಾತಿನ ಅರ್ಥವನ್ನು ತಿಳಿಯಲಾರದೆ ಹೈಮವತಿ ಗೋವರ್ಧನನ ಮುಖವನ್ನೇ ನೋಡತೊಡಗಿದಳು ಅವನು ಸ್ವರ ತಗ್ಗಿಸಿ ಕ್ಷೀಣಸ್ವರದಿಂದ ಮತ್ತೆ ಹೇಳಿದ: "ಅನ್ನಪೂರ್ಣೆಗಂತೂ ನೀನಾಗಿಯೆ ತಾಯಿಯಾಗಿದ್ದೀ. ನಿನಗಾಗುವ ಹೊಸ ಸಂತಾನವು ಅನ್ನಪೂರ್ಣೆಯ ತಮ್ಮನೋ ತಂಗಿಯೋ ಆಗುವುದು."

ಹಳ್ಳಿಯೂರಿನ ಚಿತ್ರಕಾರನು ವಿಧವಾವಿವಾಹ ಮಾಡಿಕೊಳ್ಳುವನೆ? ಹೈಮವತಿಗೆ ಅತಿಶಯ ವಿಸ್ಮಯವಾಯಿತು ತನ್ನ ಕಿವಿಗಳನ್ನೇ ತಾನು ನಂಬದಾದಳು. ಸಂಕೋಚದಿಂದ ಅವಳ ಮನಸಿಗೆ ಛೀಛೀ ಎನಿಸಿತು. ಅವಳು ಲಗುಬಗೆಯಿಂದ ಮನೆಯೊಳಕ್ಕೆ ಹೊರಟುಹೋದಳು. ಅಲ್ಲಿ ಗೋಡೆಯನ್ನು ಒರಗಿ ಕುಳಿತು ಯೋಚಿಸತೊಡಗಿದಳು. ಗೋವರ್ಧನನು ಈ ಪ್ರಸ್ತಾಪವನ್ನೆತ್ತಿದುದು ಸ್ಪರ್ಧೆಯೆಂದು ಧಾರ್ಷ್ಟ್ಯವೆಂದು ಮೊದಲು ಅವಳಿಗೆನಿಸಿತು. ಅವರೂ ಬ್ರಾಹ್ಮಣರೇ; ಆದರೆ ಅವರ ಕೈಯಡಿಗೆ ತಾವು ಉಣ್ಣಬಾರದು, ಉಂಡರೆ ತಮ್ಮ ಜಾತಿ ಕೆಡುವುದು; ಶ್ರೇಷ್ಠಕುಲದವಳಾದ ತನ್ನನ್ನು ಮದುವೆಯಾಗಬೇಕೆಂಬುದೇ ಅವನ ವಾಸನೆ. ಹೀಗಾದರೆ ತನ್ನ ತಂದೆಯ ಮನಸಿನ ಸಂತಾಪವು ದ್ವಿಗುಣಿತವಾಗುವುದು; ಇದು ತನಗೆ ತರವಲ್ಲ.

ದಾಸಿ ಅಡಿಗೆಮನೆಯನ್ನು ಸ್ವಚ್ಛಮಾಡಿ, ಪಾತ್ರೆಗಳನ್ನು ತೊಳೆದು ಮಲಗಲಿಕ್ಕೆ ಬಂದಾಗ, ಹೈಮವತಿ ಇನ್ನೂ ಕುಳಿತೇ ಇದ್ದಳು. "ಅಕ್ಕಾಜಿ, ಕುಳಿತಲ್ಲಿಯೇ ತೂಕಡಿಸುತ್ತಿದ್ದೀಯೇನು ಮತ್ತೆ? ಉಪಹಾರವಾಗಿದೆ, ಮಲಗಲ್ಲ ಇನ್ನು" ಎಂದಳು.

ಆಗ ಹೈಮವತಿ ಎದ್ದು ಹೋಗಿ ಹಾಸಿಗೆಯ ಮೇಲೆ ಮಲಗಿಕೊಂಡಳು.

ಅನ್ನಪೂರ್ಣೆ ನಿದ್ದೆಯೊಳಗೇ ಮಗ್ಗುಲು ಹೊರಳಿ ಆಕೆಯ ಕೊರಳ ಮೇಲೆ ಕೈಹಾಕಿದಳು. ಈ ಅವ್ಯಾಜಸ್ನೇಹದ ಅಪ್ಪುಗೆಯಿಂದ ಅವಳ ಮನಸು

ಕೋಮಲವಾಯಿತು. ಈ ಮಗು ತನ್ನನ್ನು ತಾಯಿಯನ್ನು ಪ್ರೀತಿಸುವಂತೆಯೇ ಪ್ರೀತಿಸುವುದು. ತನ್ನ ಮೇಲೆ ಗೋವರ್ಧನನ ಸ್ನೇಹವೂ ಕಡಿಮೆಯಿಲ್ಲ. ಮೈಯೆಲುವು ಮುರಿದುಕೊಂಡು ತನ್ನನ್ನು ಬದುಕಿಸಿದ; ತಾನು ಕೆರೆಯಲ್ಲಿ ಬಿದ್ದಾಗ ಧಾವಿಸಿ ಬಂದು ಮೇಲಕ್ಕೆ ತೆಗೆದ; ತನ್ನ ಕಲಂಕವನ್ನು ಅರುಹಿದಾಗಲೂ ಅವನು ತಿರಸ್ಕಾರ ತೋರಿಸಲಿಲ್ಲ.—ಗೋವರ್ಧನನು ಒಳಗೊಳಗೆ ತನ್ನನ್ನು ಪ್ರೇಮಿಸುತ್ತಿರುವನೆ ? ಈ ಪ್ರಶ್ನೆಯೊಡನೆ ಕಾಲೀಮಂದಿರದಲ್ಲಿಯ ಭಿತ್ತಿಚಿತ್ರವು ಅವಳ ಕಣ್ಮುಂದೆ ಕಟ್ಟಿತು. ಆ ಚಿತ್ರವನ್ನು ಕುರಿತು ತರಲನು ಆಡಿದ ಮಾತು ಅವಳ ಕಿವಿಯಲ್ಲಿ ಕಟ್ಟಿತು. ಗೋವರ್ಧನನ ಈ ಪ್ರಸ್ತಾಪವು ಅಷ್ಟು ಸ್ವಾರ್ಥರಹಿತವಾಗಿ ಇದ್ದಿರಬಹುದೆ? ಅವನ ಮಾತನ್ನು ನಂಬುವುದು ಹೇಗೆ? ಲಗ್ನವಾದ ಬಳಿಕ ಇಬ್ಬರೂ ಒತ್ತಟ್ಟಿಗಿರಲಾರಂಭಿಸಿದ ಮೇಲೆ ಅವನು ಪ್ರತಿಜ್ಞೆಯನ್ನು ಮುರಿಯಲಿಕ್ಕಿಲ್ಲವೆ? ಆದರೆ ಗೋವರ್ಧನನ ಅಭಿಮತವನ್ನು ಅಲ್ಲಗಳೆದರೆ ತನಗೆ ಬೇರೆ ಉಪಾಯವುಂಟೆ? ವಿಚಾರಗಳ ತಾಕಲಾಟದ ಗೊಂದಲದಲ್ಲಿ ಹೈಮವತಿಗೆ ಬೆಳತನಕ ಕಣ್ಣಿಗೆ ಕಣ್ಣು ಹತ್ತಲಿಲ್ಲ.

ಗೋವರ್ಧನನಿಗೂ ನಿದ್ದೆ ಬರಲಿಲ್ಲ. ಹೈಮವತಿ ತನ್ನ ಸೂಚನೆಯನ್ನು ಕೇಳಿ ಒಮ್ಮೆಲೆ ವಿಮುಖಳಾಗಿ ಹೋದುದಕ್ಕೆ ಅವನು ಲಜ್ಜಿತನಾಗಿದ್ದ, ಭೀತನಾಗಿದ್ದ. ಅವಳು ತನ್ನ ಮಾತಿನಿಂದ ಅಪಮಾನಿತಳಾಗಿ ಸಿಟ್ಟಿನಿಂದ ಹೊರಟು ಹೋದಳೋ ಏನೊ. ತಾನೆಂತಹ ತಿಳಿವುಗೆಟ್ಟ ಮಾತನಾಡಿದೆನಲ್ಲ! ತನ್ನನ್ನು ವಿಷಯಲಾಲಸಿಯೆಂದು ಹೈಮವತಿಯೆಲ್ಲಿ ತಪ್ಪು ತಿಳಿದುಕೊಂಡಳೋ, ಎಂದು ಅವನು ಬೆದರಿದ. ಅವಳು ಎಷ್ಟು ಸುಂದರಿಯಾಗಿದ್ದರೂ ಅವಳ ಮತ್ತು ಅವಳ ತಂದೆಯ ಲಜ್ಜೆಯನ್ನು ಕಾಯುವ ಹೊರತು ತನಗೆ ಬೇರೆ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಅವಳಿಗೆ ಮನಗಾಣಿಸಿ ಕೊಡುವುದು ಸಾಧ್ಯವಿಲ್ಲ. ಅವಳು ವಿಧವೆ, ಮೇಲಾಗಿ ಬೇರೊಬ್ಬನ ಸಂತಾನವನ್ನು ಒಡಲೊಳಗೆ ಧರಿಸಿದವಳು—ಅವನ ಮನಸಿಗೆ ಹೇಯವೆನಿಸಿ ಮೈನವಿರೆದ್ದಿತು. ಹೈಮವತಿ ತನಗೆ ಮಾಡಿದ ಉಪಕಾರಕ್ಕಿಂತ ತನ್ನ ಈ ಪ್ರತ್ಯುಪಕಾರವು ಗುರುತರವಾದುದೆಂದು, ಕಠಿನವಾದುದೆಂದು ತಾನೇ ಅವಳಿಗೆ ತಿಳಿಸಿಹೇಳಬೇಕೆ? ಅವಳೇ ತಿಳಿದುಕೊಳ್ಳುವುದು ಉಚಿತ.

ಮರುದಿನ ನಸುಕಿನಲ್ಲಿ ಗೋವರ್ಧನನು ಕೊಳದೊಳಗೆ ಮೋರೆತೊಳೆದು ಕೊಂಡು ಮರಳುತ್ತಿದ್ದ. ಹೈಮವತಿ ಕೈದೋಟದೊಳಗೆ ಹೂ ಕೊಯ್ಯುತ್ತಿದ್ದಳು. ಅವನು ಮಾತನಾಡಿಸಿದ: "ಏನು ನಿಶ್ಚಯಮಾಡಿದಂತಾಯಿತಮ್ಮಾ? ನಾನಂತೂ ನಿನ್ನ ಕಷ್ಟವನ್ನು ದೂರಮಾಡದೆ ಹೋಗಲಾರೆ. ಆದರೆ ಇಲ್ಲಿರುವುದಕ್ಕೆ ಸರಿಯಾದ ಕಾರಣವೂ ತೋಚಲೊಲ್ಲದು. ನೀನು ನನ್ನ ಸಂಗಡ ಬಂದುಬಿಡು; ನಾನು ಬದುಕಿರುವ ವರೆಗೂ ನಿನಗೆ ಮಾನಹಾನಿಯಾಗಲಿ ತೊಂದರೆಯಾಗಲಿ ಒಂದಿಷ್ಟೂ ಆಗಲಾರದು."

ಹಿಡಿದು ಬಗ್ಗಿಸಿದ ಗಿಡದ ಕೊಂಬೆಯನ್ನು ಸರಕ್ಕನೆ ಬಿಟ್ಟು ಹೈಮವತಿಯೆಂದಳು: "ನೀವು ಹೇಳಿದಾಕ್ಷಣಕ್ಕೆ ನಂಬುವುದು ಹೇಗೆ?"

ತನ್ನ ಅಪೂರ್ವ ಸ್ವಾರ್ಥತ್ಯಾಗಕ್ಕೆ ಈ ರೀತಿಯ ಸನ್ಮಾನವೆ? ಗೋವರ್ಧನನಿಗೆ ರೇಗಿತು. ಆದರೆ ಪ್ರಯತ್ನಪೂರ್ವಕವಾಗಿ ಸಿಟ್ಟನ್ನು ಸೈರಿಸಿಕೊಂಡು ನಗುತ್ತ ನುಡಿದ: "ಯಾವ ಆಣೆ ಇಟ್ಟುಕೊಂಡರೆ ನಿನಗೆ ನಂಬುಗೆ ಹುಟ್ಟುವುದೋ ಆ ಆಣೆ ಇಟ್ಟುಕೊಳ್ಳುತ್ತೇನೆ;—ಅನ್ನಪೂರ್ಣೆಯ ತಲೆಯ ಮೇಲೆ ಕೈಯಿಟ್ಟು ಹೇಳುವೆ, ಕಾಳೀಮಾತೆಯ ಪಾದಗಳನ್ನು ಮುಟ್ಟಿ ಹೇಳುವೆ.— ನಾವೀಗ ಈ ಮನೆಯೊಳಗೆ ಏಕತ್ರವಾಗಿರುವ ಹಾಗೆಯೇ ಸಾಯುವ ತನಕ ಇರುತ್ತೇನೆ. ಇದಕ್ಕೂ ಹೆಚ್ಚಿನ ಸಂಪರ್ಕ ನಮ್ಮಿಬ್ಬರಲ್ಲಿ ಸಂಭವಿಸಲಾರದು."

ವಿಸ್ಮಯದಿಂದ, ಸಂಭ್ರಮದಿಂದ, ಶ್ರದ್ಧೆಯಿಂದ ಅವಾಕ್ಕಾದಳು ಹೈಮವತಿ. ತಾನಾಡಿದ ಮಾತಗಾಗಿ ಅವಳಿಗೆ ವಿಪರೀತ ನಾಚಿಕೆಯೆನಿಸಿತು. ಈಗ ನಂಬುಗೆಯುಂಟಾಯಿತೆಂಬುದನ್ನು ಅವಳು ಗೋಣು ಹಾಕಿ ತಿಳಿಸಿದಳು.

"ನಡೆ ಹಾಗಾದರೆ, ಕಾಳೀಮಂದಿರದಲ್ಲಿ ನನ್ನ ಪ್ರತಿಜ್ಞೆಯನ್ನು ನೋಂದು ಮಾಡಿಸುವ."

'ನೀವು ಹೇಳಿದುದೇ ಸಾಕು, ಪ್ರತಿಜ್ಞೆಯ—ಆಣೆಚೂರಿಯ—ಆಗತ್ಯವಿಲ್ಲ' ಎಂಬುದು ಹೈಮವತಿ ಆಡಬೇಕೆಂದು ಬಯಸಿದ ಮಾತು. ಆದರಿದು ಅಂತರಂಗದಲ್ಲಿಯೇ ಉಳಿದುಬಿಟ್ಟಿತು; ಬಾಯಿಂದ ಹೊರಡಲಿಲ್ಲ. ಅವಳು ಮಂತ್ರಮುಗ್ಧಳಂತೆ ಗೋವರ್ಧನನನ್ನು ಹಿಂಬಾಲಿಸಿದಳು.

ಇಂದೇ ರಾತ್ರಿ ಹೊರಟುಹೋಗುವುದೆಂದು ಗೊತ್ತಾಗಿತ್ತು. ಇಡೀ ದಿನದಲ್ಲಿ ಹೈಮವತಿ ಗೋವರ್ಧನನ ಹತ್ತಿರ ಒಮ್ಮೆಯೂ ಹೋಗಲಿಲ್ಲ. ತಂದೆಯ ಚಿರವಿಯೋಗ, ಗೋವರ್ಧನನ ಚಿರಮಿಲನ ಎರಡೂ ಸಮಾನ ದುಃಖಕರ ಅವಳಿಗೆ. ಹಗಲೆಲ್ಲವನ್ನೂ ಅವಳು ತಂದೆಯ ಜೊತೆಯಲ್ಲಿಯೇ ಕಳೆದಳು. ಸಂಜೆಯಾದ ಆದ ಹಾಗೆ ಹೈಮವತಿಯ ಮುಖವು ಮ್ಲಾನ-ವಾಗತೊಡಗಿತು.

ರಾತ್ರಿಯ ಊಟವಾದ ಬಳಿಕ ಅನ್ನಪೂರ್ಣೆ ಎಂದಳು: "ಅವ್ವಾ, ನನಗೆ ನಿದ್ದೆ ಬಂದಿದೆ, ನಾನು ಮಲಗಿಕೊಳ್ಳುತ್ತೇನೆ, ನೀನು ನನ್ನ ಹತ್ತಿರ ಕೂತುಕೋ ನಡೆ."

ಹೈಮವತಿ ಒಮ್ಮೆಲೆ ಸಿಟ್ಟಾಗಿ ಅನ್ನಪೂರ್ಣೆಯ ನೀಡಿದ ಕೈಗಳನ್ನು ತಳ್ಳಿ ರುಕ್ಷಸ್ವರದಲ್ಲಿ ಮಾತನಾಡಿದಳು: "ನಿನ್ನದೇನು ಕಾಟ ಮತ್ತೆ, ನಡೆ! ಈಗ ನಿನ್ನ ಹತ್ತಿರ ಕೂತುಕೊಳ್ಳಲಿಕ್ಕೆ ಆಗುವುದಿಲ್ಲ ನನಗೆ. ನಿಮ್ಮ ತಂದೆಯ ಹತ್ತಿರ ಮಲಗು ಹೋಗು!"

ಅನ್ನಪೂರ್ಣೆ ಅವಾಕ್ಕಾದಳು. ಕಣ್ಣು ಬಿಟ್ಟುಕೊಂಡು ಅವ್ವನನ್ನೇ ನೋಡುತ್ತ ನಿಂತುಕೊಂಡಳು. ಅವಳು ಈ ಮನೆಯಲ್ಲಿದ್ದು ಒಂದು ತಿಂಗಳ ಮೇಲಾಯಿತು, ಅವ್ವನಿಂದ ಈ ರೀತಿಯ ಆಘಾತ ಅವಳಿಗೆಂದೂ ಆಗಿರಲಿಲ್ಲ. ತಾಯಿಯ ಈ ನಡತೆ ಅವಳನ್ನು ವಿಸ್ಮಯಗೊಳಿಸಿತು, ಗಾಬರಿಗೊಳಿಸಿತು. ಅವಳು ಮೆಲ್ಲಮೆಲ್ಲನೆ ತಂದೆಯ ಬಳಿ ಹೋಗಿ ಮ್ಲಾನವದನಳಾಗಿ ಸುಮ್ಮನೆ ನಿಂತುಕೊಂಡಳು.

ಗೋವರ್ಧನನು ಮಗಳನ್ನು ಕರೆದು ತೊಡೆಯಮೇಲೆ ಕುಳ್ಳಿರಿಸಿ ಕೊಂಡು ಮಾತನಾಡಿಸಿದ: "ಏನು ಅನೂ ?"

"ಅವ್ವ ಈವೊತ್ತು ನನಗೆ ನಿನ್ನ ಹತ್ತಿರ ಮಲಗೆಂದು ಹೇಳಿದಳು!" ಅಳು-ದನಿಯಲ್ಲಿ ಅನ್ನಪೂರ್ಣೆ ಉತ್ತರವಿತ್ತಳು.

"ಮಲಗಿಕೋ" ಎಂದು ನುಡಿದು ಗೋವರ್ಧನನು ಗಟ್ಟಿಯಾಗಿ ಉಸಿ ರ್ಗರೆದ.

ಅಪ್ಪ ಅಪ್ಪ ಇಬ್ಬರೂ ಏನೋ ಒಂದು ತರಹ ಆಗಿದ್ದಾರೆ ಎಂದ್ಕೊಂಡು, ಅನ್ನಪೂರ್ಣೆ ಚಳಿಯಿಂದ ಮುದ್ದೆಯಾಗಿ ಮಲಗಿದಳು. ಗೋವರ್ಧನನು ಹಚ್ಚಡವನ್ನು ಹೊಚ್ಚಿ ಅವಳ ಬೆನ್ನ ಮೇಲೆ ನೀರವವಾಗಿ ಕೈಯಾಡಿಸತೊಡಗಿದ. ಅವಳಿಗೆ ಬೇಗನೆ ನಿದ್ದೆಯೇನೋ ಹತ್ತತೊಡಗಿತು. ಆದರೆ ನಡುನಡುವೆ ಬೆಟ್ಟಿಬೆಟ್ಟಿ ಬೀಳುತ್ತಲಿದ್ದಳು.

ವಂಶಲೋಚನರು ಜಪ-ತಪ ಮುಗಿಸಿಕೊಂಡು ಬಂದು ಮಲಗಿದಾಗ ಗಭೀರ ರಾತ್ರಿಯಾಗಿತ್ತು. ಹೈಮವತಿ ಅವರ ಕೋಣೆಗೆ ಹೋಗಿ ಕಾಲು ದಿಸೆಯಲ್ಲಿ ಕುಳಿತು ಕಾಲಮೇಲೆ ಕೈಯಿಟ್ಟಳು. ಅವರು ಅತ್ಯಂತ ಅಚ್ಚರಿಗೊಂಡರು. "ಏನಮ್ಮಾ, ನಿನಗಿನ್ನೂ ನಿದ್ದೆ ಬರಲಿಲ್ಲವೆ? ಮಲಗಿಕೋ ಹೋಗು," ಎಂದರು.

ತನ್ನ ದುಃಖವನ್ನು ಅತಿ ಪ್ರಯತ್ನದಿಂದ ಅದುಮಿಟ್ಟು ಹೈಮವತಿ ನುಡಿದಳು: "ಇನ್ನೂ ನಿದ್ದೆ ಬಂದಿಲ್ಲ, ಅಪ್ಪಾ. ಕೊಂಚ ನಿಮ್ಮ ಕಾಲೊತ್ತಿ ಹೋಗಬೇಕೆಂದು ಬಂದೆ."

ಕಾಲೊತ್ತುವುದೆಂಬುದು ಒಂದು ನೆಪ;— ಕೊನೆಯ ಪಿತೃಸೇವೆಯೂ ಆಗುವುದು;— ತಂದೆಗೆ ಕೊನೆಯ ನಮಸ್ಕಾರವನ್ನು ಸಲ್ಲಿಸಿ ಅವರ ಪಾದಧೂಳಿಯನ್ನು ತೆಗೆದುಕೊಳ್ಳಲೆಂದು ಹೈಮವತಿ ಬಂದುದು. ಒಳಗೆ ಹುದುಗಿಸಿಟ್ಟ ಕ್ರಂದನವು ಅವಳ ಸ್ವರದಲ್ಲಿ ಕಂಪನವನ್ನು ಹುಟ್ಟಿಸಿತ್ತು.

ವಂಶಲೋಚನರಿಗೆ ಇನ್ನಷ್ಟು ಅಚ್ಚರಿಯಾಯಿತು. "ಈವೊತ್ತೇನು ನಿನ್ನ ಮೈಯೊಳಗೆ ಚೆನ್ನಾಗಿಲ್ಲವೆ? ಇಡೀ ದಿನ ನೋಡುತ್ತೇನೆ, ಹೇಗೆಹೇಗೋ ಕಾಣುತ್ತಿದ್ದೀ," ಎಂದು ಉದ್ವೇಗದಿಂದ ಅವರು ವಿಚಾರಿಸಿದರು.

"ಇಲ್ಲಪ್ಪಾ, ನನಗೇನೂ ಆಗಿಲ್ಲ."

ಅವಳ ಕೃತ್ರಿಮ ಹಾಸ್ಯವು ವಂಶಲೋಚನರನ್ನು ಠಕ್ಕಿಸಿತು ಅವರು ಮುದುಕರಾಗಿದ್ದರೂ ನಿದ್ದೆ ಅವರಿಗೆ ಸಹಜವಾಗಿ ಬರುತ್ತಿದ್ದಿತು, ಚಿಕ್ಕಮಕ್ಕಳ ಹಾಗೆ. ಮಲಗಿದ ಐದು ನಿಮಿಷಗಳಲ್ಲಿ ನಿದ್ರಿಸುತ್ತಿದ್ದರು. ಅವರ ಮೂಗು ಸದ್ದು ಮಾಡಲಾರಂಭಿಸಿತು. ಆಗ ಹೈಮವತಿಯ ಕಂಬನಿಗಳ ಹೊಳೆಯು ಒಡ್ಡೊಡೆಯಿತು. ತಂದೆಯ ಅಡಿಗಳನ್ನು ತೊಡೆಯ ಮೇಲಿಟ್ಟುಕೊಂಡು,

ಅವುಗಳ ಮೇಲೆ ಮೊಗಪಿಟ್ಟು ಅಳಲು ತೊಡಗಿದಳು. ಆ ಅಳುವನ್ನು ನಿಲ್ಲಿಸಲು ಅವಳು ಪ್ರಯತ್ನಿಸಿದಷ್ಟೂ ಅದು ಗಣಿತಶ್ರೇಢಿಯಿಂದ ಹೆಚ್ಚುತ್ತಿದ್ದಿತು.

ಎಷ್ಟೋ ಹೊತ್ತಿನ ತರುವಾಯ ಮಗ್ಗುಲು ಬದಲಿಸುವಾಗ ಕಾಲಿಗೆ ಪ್ರತಿಬಂಧವಾದುದರಿಂದ ವಂಶಲೋಚನರ ನಿದ್ದೆಯ ಬಿಗು ಸಡಿಲಿತು. ತಂದ್ರಾತುರವಾದ ಎವೆಗಳನ್ನು ಸಸುವೆ ಪಿಳುಕಿಸಿ ಅವರೆಂದರು: "ಕಾಲಮೇಲೆಯೇ ನಿದ್ದೆ ಮಾಡುತ್ತಿದ್ದೀಯಾ ಹಿಮೂ? ಹೋಗಮ್ಮ, ಮಲಗಿಕೋ ಹೋಗು, ರಾತ್ರಿ ಬಹಳವಾಗಿದೆ."

ಅವಸರದಿಂದ ಮೋರೆಯನ್ನೊರಸಿಕೊಂಡು ಹೈಮವತಿ ಹೇಳಿದಳು: "ಹೋಗುತ್ತೇನಪ್ಪ!"

"ಹಾಂ" ಎಂದು ವಂಶಲೋಚನರು ಮಗ್ಗುಲುಹೊರಳಿ ಗೊರಕೆ ಹೊಡೆಯಲು ತೊಡಗಿದರು.

ಹೈಮವತಿ ತಂದೆಯ ಪಾದಗಳನ್ನು ಹಣೆಯಿಂದ ಮುಟ್ಟಿ ಎದ್ದು ನಿಂತಳು. ಕಂಬನಿದುಂಬಿದ ಕಣ್ಣುಗಳಿಂದ ಮಲಗಿದ ತಂದೆಯನ್ನು ನಿಟ್ಟಿಸುತ್ತ ಅವಳು ಎಂದುಕೊಂಡಳು - ನಿಮ್ಮನ್ನು ಈ ಇಳಿವಯಸಿನಲ್ಲಿ ನಾನು ಕೈಬಿಟ್ಟುಹೋಗುತ್ತಿದ್ದೇನೆ; ನೀವು ಕಾಳೀಮಾತೆಯ ಭಕ್ತನಂದನರು; ಅವಳೇ ನಿಮ್ಮನ್ನು ನೋಡಿಕೊಳ್ಳುತ್ತಾಳೆ. ನಾನು ತರಲನ ಸಂತತಿಯ ರಕ್ಷಣೆಗಾಗಿ ಈ ಕಠೋರವಾದ ಕೆಲಸಕ್ಕೆ ತೊಡಗಿದ್ದೇನೆ; ಇದರ ಕಠಿನವಾದ ಪ್ರತಿಫಲವನ್ನೂ ಎಲ್ಲ ಬಗೆಯಿಂದ ಅನುಭೋಗಿಸುತ್ತೇನೆ; ಆದರೆ ನಿಮ್ಮೊಡನೆ ವಿಶ್ವಾಸಘಾತ ಮಾಡಿದ, ನಿಮ್ಮನ್ನು ಹತಾಶಗೊಳಿಸಿದ ದುಃಖವು ಮಾತ್ರ ನನಗೆ ಯಾವಾಗಲೂ ದುಃಸಹವಾಗಿರುವುದು; ನೀವು ಹಲವು ಮಕ್ಕಳನ್ನು ಕಳೆದುಕೊಂಡ ದುಃಖವನ್ನೂ ನುಂಗಿಕೊಂಡಿದ್ದೀರಿ, ಈ ಹತಭಾಗಿನಿಯಾದ ಮಗಳ ಬಗ್ಗೆ ದುಃಖ ಹಚ್ಚಿಕೊಳ್ಳಬೇಡಿರಿ; ನೀವು ವಿಚಲಿತರಾಗಲಿಕ್ಕಿಲ್ಲ ನಿಜ, ಆದರೆ ನಾನು ಮಾತ್ರ ನಿಮ್ಮನ್ನು ಸಮಾಜದಲ್ಲಿ ಅಪಮಾನಿತರನ್ನಾಗಿ ತಿರಸ್ಕೃತರನ್ನಾಗಿ ಮಾಡಿ ಹೋಗುತ್ತಿದ್ದೇನೆ!

ತಾನು ಓಡಿಹೋಗುವುದರಿಂದ ಮುದುಕನ ಸ್ಥಿತಿ ಏನಾಗುವುದೆಂಬುದನ್ನು ನೆನೆದು ಹೈಮವತಿಯ ಹೃದಯವು ತಳಮಳಿಸಿತು. ಲಗುಬಗೆಯಿಂದ

ಕೋಣೆಯಿಂದ ಹೊರಬಿದ್ದಳು. ಎದುರಿನಲ್ಲಿಯೇ ಗೋವರ್ಧನನ ಕೋಣೆ. ಅವಳು ಬೆಚ್ಚಿ ನಿಂತಳು. ಏನು ಮಾಡಲಿ? ಯಾವುದು ಉಚಿತ? 'ನಡೆಯಿರಿ, ನನ್ನನ್ನು ಈಗಲೇ ಓಡಿಸಿಕೊಂಡು ನಡೆಯಿರಿ' ಎಂದು ಗೋವರ್ಧನರನ್ನು ಬೇಡುವುದೇ? ಅಥವಾ....ಅಥವಾ ಏನು?

ಹೊರಡುವ ಉತ್ಸುಕತೆಯಿಂದ ಗೋವರ್ಧನನು ತನ್ನ ಕೋಣೆಯೊಳಗೆ ಎಡೆಯಾಡುತ್ತಿದ್ದ. ಹೈಮವತಿ ತನ್ನ ತಂದೆಯ ಕೋಣೆಯಿಂದ ಹೊರಬಿದ್ದು ಬರುಬರುತ್ತ ನಡುವೆಯೆ ನಿಂತುದನ್ನು ಕಂಡು, ಅವನು ಮಲಗಿದ್ದ ಅನ್ನಪೂರ್ಣೆಯನ್ನು ಎತ್ತಿಕೊಂಡು ಹೊರಹೊರಟ.

" ನಡೆ. "

ಹೈಮವತಿಯ ಮುಖವು ಚಳಿಗಾಲದ ಮುಳುಗಲಾದ ಚಂದಿರನಂತೆ ಬೆಳುಪೇರಿತು. ಮೈಗೂದಲುಗಳು ಸೆಟ್ಟೆಗಾದವು. ಮೆಲ್ಲಮೆಲ್ಲನೆ ಗೋವರ್ಧನನನ್ನು ಹಿಂಬಾಲಿಸಿ ನಡೆದಳು.

## ೧೩

ದಿನಕ್ರಮದಂತೆ ದಾಸಿ ನಸುಕಿನಲ್ಲಿದ್ದಳು. ಮುಸುರೆ ಪಾತ್ರೆಗಳನ್ನು ತಿಕ್ಕಿ ತೊಳೆದಳು. ಅವುಗಳನ್ನು ಒಳಗೆ ತಂದು ಡಬ್ಬುಹಾಕುತ್ತ ಅವಳು ಕೂಗಿದಳು: "ಅಕ್ಕಾಜಿ, ಒಲೆ ಹೊತ್ತಿಸಲೆ?"

ಉತ್ತರ ಬರಲಿಲ್ಲ.

ಹೈಮವತಿ ಪೂಜೆಗೆ ಕುಳಿತಿದ್ದಾಳಾದೀತು, ಅದಕ್ಕೇ ಅವಳು ಮಾತನಾಡಲಿಲ್ಲ ಎಂದು ಬಗೆದು ದಾಸಿ ಕೆಲಸಕ್ಕೆ ಹೋದಳು. ಹಕ್ಕೆಯನ್ನು ಬಳಿದು ಹಸ ಮಾಡಿದಳು; ಆಕಳಿಗೆ ಮೇವು ಹಾಕಿದಳು; ಕೊಳಕ್ಕೆ ಹೋಗಿ ಬಟ್ಟೆಯನ್ನು ಒಗೆದುಕೊಂಡು ಬಂದಳು. ಇಷ್ಟು ಹೊತ್ತಾದರೂ ಹೈಮವತಿ ಕಣ್ಣಿಗೆ ಬೀಳಲಿಲ್ಲ. ಅನ್ನಪೂರ್ಣೆಯ ದನಿಯೂ ಇಲ್ಲ.

"ಅಕ್ಕಾಜೀ —" ದಾಸಿ ಕೂಗಿದಳು.

ಉತ್ತರವಿಲ್ಲ.

"ಅನೂ—"

ಉತ್ತರವಿಲ್ಲ.

ಇಬ್ಬರೂ ಗೋವರ್ಧನನ ಕೋಣೆಯಲ್ಲಿ ಇದ್ದಿರಬಹುದೆಂದು ದಾಸಿ ಹೋಗಿ ನೋಡಿದಳು. ಅಲ್ಲಿಯೂ ಇಲ್ಲ—ಗೋವರ್ಧನನು ಕೂಡ ಇಲ್ಲ. ಅವಳು ಅಚ್ಚರಿಗೊಂಡು ಒಂದೊಂದಾಗಿ ಎಲ್ಲ ಕೋಣೆಗಳಲ್ಲಿಯೂ ನೋಡಿದಳು. ಊಂ ಹೂಂ. ಕೊನೆಗೆ ಕಾಲೀಮಂದಿರಕ್ಕೆ ಹೋದಳು. ವಂಶಲೋಚನರು ಪೂಜೆ ಮಾಡುತ್ತಲಿದ್ದರು; ಉಳಿದವರು ಯಾರೊಬ್ಬರೂ ಇರಲಿಲ್ಲ.

ಬಲವಾದ ಸಂದೇಹದಿಂದ ದಾಸಿಯ ಮನಸು ಚಂಚಲವಾಯಿತು. ಅವರು ಓಣಿಯಲ್ಲಿ ಯಾರ ಮನೆಗಾದರೂ ಹೋಗಿರುವರೋ ಹೇಗೆಂದು ಪ್ರತಿಯೊಂದು ಮನೆಗೂ ಹೋಗಿ ನೋಡಿದಳು. ಗೋವರ್ಧನ, ಹೈಮವತಿ, ಅನ್ನಪೂರ್ಣೆ ಮೂವರೂ ಕಾಣೆಯಾಗಿರುವರೆಂಬ ವಿಷಯವು ಕ್ಷಣಮಾತ್ರದಲ್ಲಿ ಎಲ್ಲೆಲ್ಲಿಯೂ ಪ್ರಚುರವಾಯಿತು. ಚಿತ್ರ-ವೈಚಿತ್ರ್ಯಗಳಿಂದ ವಿರಹಿತವಾಗಿದ್ದ ಹಳ್ಳಿಯ ಜೀವನ ದಲ್ಲಿ ಜನರಿಗೊಂದು ಒಳ್ಳೆಯ ಮನೋರಂಜನೆಯ ವಿಷಯ ಸಿಕ್ಕಂತಾಯಿತು. ಊರಿಗೂರೇ ಚಪಲಚಂಚಲವಾಯಿತು. ಹೆಂಗುಸರು ಗಂಡುಸರು ಎಲ್ಲರೂ ತಮ್ಮ ಮನೆಗೆಲಸಗಳನ್ನು ಮರೆತರು. ಅರ್ಧವಾದ ಕೆಲಸವನ್ನು ಅರ್ಧಕ್ಕೇ ಬಿಟ್ಟುಕೊಟ್ಟು, ಕೈಯೊಳಗಿದ್ದ ಗುಡುಗುಡಿಯನ್ನು ಕೂಡ ಬೀಸಾಡಿಬಿಟ್ಟು ವಂಶಲೋಚನರ ನಿರ್ಜನವಾದ ಮನೆಯಲ್ಲಿ ಒಟ್ಟುಗೂಡಿದರು.

" ಅವ್ವಯ್ಯ, ಹಿಮಿ ಖೋಡಿ ಒಳಗಿಂದೊಳಗೆ ಹೀಗಿದ್ದಳೇ ಮಾಮಿ?"

ತೊತ್ತು ಮಾಮಿ ಎಂದು ಸಂಬೋಧಿಸಿದುದು ತರಲನ ಅತ್ತೆಯನ್ನು. ಅವಳು ಮೋರೆ ಸೊಟ್ಟಮಾಡಿ, ಮೂಗಿನೊಳಗಿನ ನತ್ತನ್ನು ಕುಣಿಸುತ್ತ ಅವ-ಹೇಲನೆಯಿಂದ ನುಡಿದಳು: " ಯಾವ ಹೆಂಗುಸು ಹೇಗೆಂಬುದು ಅವರ ಮೋರೆ ನೋಡಿದರೇ ಗೊತ್ತಾಗುತ್ತದೆ. ಹಿಮಿಯೇನು ಕಡಿಮೆ ಆಟದವಳಲ್ಲ ನಮ್ಮ ಹುಡುಗನೆಂದು ನಾನು ಹೇಳುವುದಿಲ್ಲ, ಸತ್ತುಹೋಗಿದ್ದಾನೆಂದು ಹೇಳುವು ದಿಲ್ಲ, ಊರವರೆಲ್ಲಾ ಬಲ್ಲರು—ನಮ್ಮ ತರಲ ಎಂಥ ಒಳ್ಳೇ ಹುಡುಗ! ಈ ದಿಕ್ಕೇಡಿ ಹಿಮಿ ಅವನ ಮೇಲೆ ವಿಧವಾವಿವಾಹದ ಆರೋಪ ಹೊರಿಸಿದ್ದಳು. ಅವನು ಅಭಿಪ್ರಾಣಿ, ಲೋಕಲಜ್ಜೆಗೆ ಅಂಜಿ ಊರು ಬಿಟ್ಟೇ ಓಡಿಹೋದ; ನಡು

ದಾರಿಯಲ್ಲಿ ಜೀವವನ್ನೇ ಕೊಟ್ಟ. ಈಗ ಅವಳು ಎಲ್ಲಿಯವನೋ ಭಾಸ್ಕರ-ಬ್ರಾಹ್ಮಣನಂತೆ, ಅವನ ಬೆನ್ನು ಹತ್ತಿದ್ದಾಳೆ ಸಾಯಲಿಕ್ಕೆ!"

"ಸಾಯುವುದೇ ಸರಿ! ಹತ್ತಿರವೇ ಹೊಂಡವಿತ್ತು, ಬಿದ್ದು ಸಾಯಲಿಲ್ಲ!"

ಆ ಬಳಿಕ ಹೈಮವತಿಯ ಮನೆದಾಸಿ, ಎಂದು ಯಾವಾಗ ಎಲ್ಲಿ ಹೈಮ-ವತಿ ಗೋವರ್ಧನನೊಂದಿಗೆ ಯಾವ ರೀತಿ ಇರುತ್ತಿದ್ದಳು, ರಾತ್ರಿ ಎಷ್ಟು ಹೊತ್ತಿನ ತನಕ ಅವನ ಹತ್ತಿರ ಇರುತ್ತಿದ್ದಳು, ಎಷ್ಟು ದಿನ ರಾತ್ರಿಯಲ್ಲಿ ಮೆಲ್ಲನೆದ್ದು ಹೋಗಿದ್ದಳು, ಅವನ ಮಗಳು ಅವಳನ್ನು ಅವ್ವಾ ಎಂದೇಕೆ ಕರೆ-ಯುತ್ತಿದ್ದಳು ಮೊದಲಾದವನ್ನು—ತಾನಾಗಿ ಕೊಂಚ, ಹೆಂಗುಸರ ಒತ್ತಾಯಕ್ಕೆ ಕೊಂಚ—ಪ್ರಸಂಗಾನುಸಾರವಾಗಿ ಬಣ್ಣಕೊಟ್ಟು ಮನೋರಂಜಕವಾಗಿ ಹೇಳಿದಳು.

ಮನೆಯ ಒಳಗಡೆ ಹೆಂಗುಸರ ಸಭೆಯಾದರೆ, ಹೊರಭಾಗದಲ್ಲಿ ಗಂಡುಸರ ಚರ್ಚಾಕೂಟ. ವಿಶು ಕಾಕಾ ಕೆಮ್ಮುತ್ತ ಮಾತನಾಡಿದ: "ವಂಶಲೋಚನರು ತಾವಾಗಿಯೇ ಮುಳುವು ಮಾಡಿಕೊಂಡರು; ಗೋಬರ್ಧನನನ್ನು ಅಳಿಯನಂತೆ ಆದರಿಸಿ ಮನೆಯೊಳಗಿಟ್ಟುಕೊಂಡಿದ್ದರು."

"ಹತಭಾಗಿನಿ ಹಗಲೂ ರಾತ್ರಿ ಗೋವರ್ಧನನ ಹತ್ತಿರವೇ ಇರುತ್ತಿದ್ದಳೆಂದು ಕಾಣುತ್ತದೆ," ಎಂದ ಹಾರು.

"ಶಾಸ್ತ್ರವೇ ಇದೆ—ಘೃತಕುಂಭಸಮಾ ನಾರೀ ತಪ್ತಾಂಗಾರಸಮಃ ಪುಮಾನ್—ಬೆಂಕಿಯ ಹತ್ತಿರ ತುಪ್ಪದ ಕೊಡ ಇಟ್ಟರೆ ಕರಗುವುದೇ," ಎಂದ ಅಕ್ಕೈತನ.

"ತರಲನ ಮೇಲೆಯೇ ತಪ್ಪು ಹೇರಿ ಅವನ ಮಾನವನ್ನು ಕಳೆದರು ವಂಶದಾದಾ. ಆದರೀಗ? ಇದರಿಂದೇನು ಸಿದ್ಧವಾಯಿತು?" ಎಂದು ನುಡಿದ ತರಲನ ಮಾವ.

ವಿಶು: "ಆದಂತೂ ಆಯಿತು. ಈಗ ಮುಂದೆ ಮಾಡತಕ್ಕುದೇನು? ಪೋಲಿಸರಿಗೆ ತಿಳಿಸುವುದೇ ಸರಿಯಾದೀತು"

ಹಾರು: "ಅದರಿಂದೇನಾಗುವುದು? ಗ್ರಹಣ ಹಿಡಿದು ಮೈಲಿಗೆಯಾದ

ಮಡಕೆಯನ್ನು ಯಾರಾದರೂ ಮನೆಯೊಳಗೆ ಇಟ್ಟುಕೊಳ್ಳುವುದುಂಟೆ? ಗಟ್ಟಿಯಿದ್ದರೂ ಶಿಪ್ಪಿಗೆಸೆಯುವುದೇ!"

ಆಕ್ರೈತವ: "ಆದರೆ ಅವರು ತೆಗೆದುಕೊಂಡು ಹೋಗಿದ್ದ ಆಭರಣ-ಹಣಗಳನ್ನು ತಿರುಗಿಪಡೆಯುವುದು ಬೇಡವೆ?"

ತರಲನ ಮಾವ: "ಇಷ್ಟೇ ಏಕೆ, ಅವರನ್ನು ಸೆರೆಮನೆಗೆ ಅಟ್ಟಬೇಕು."

ಬಳಿಕ ಕಾಯದೆಯ ವಿಚಾರ-ವಿವೇಚನೆ ಹೊರಟಿತು—ಗಂಡ ಸತ್ತ ಹೆಣ್ಣುಮಗಳು ಕಾಣೆಯಾದರೆ, ಅವಳನ್ನು ಓಡಿಸಿಕೊಂಡು ಹೋದ ಗಂಡಸಿಗೆ ಶಿಕ್ಷೆಯಿದೆಯೋ ಇಲ್ಲವೆ? ಅಲಂಕಾರಗಳನ್ನು ಅಪಹರಿಸಿದ ಬಗ್ಗೆ ಕಳವಿನ ಆರೋಪವನ್ನು ಅವನ ಮೇಲೆ ಹೊರಿಸಬಹುದೇ ಹೇಗೆ?

ಇವೆಲ್ಲ ಯೋಚನೆಗಳಲ್ಲಿ ಮುಖ್ಯ ವಂಶಲೋಚನರೇ ಇರಲಿಲ್ಲ. ಅವರ ಪೂಜೆ-ಪುನಸ್ಕಾರಗಳೇ ಮುಗಿದಿರಲಿಲ್ಲ ಇನ್ನೂ. ಮಧ್ಯಾಹ್ನವಾದರೂ ಊರ ಜನರಿಗೆ ಯಾರಿಗೂ ಮನೆಗೆ ಹೋಗುವ ಅವಸರವೇ ಇಲ್ಲ. ಇಂತಹ ಸ್ವಾರಸ್ಯವಾದ ಘಟನೆಯನ್ನು ಕುರಿತು ವಂಶಲೋಚನರೊಡನೆ ಆಲೋಚಿಸದೆ ಹೋಗುವುದಾದರೂ ಹೇಗೆ? ಅವರ ಆಗಮನಕ್ಕೆ ವಿಲಂಬವಾಗುತ್ತಿರುವುದನ್ನು ಕಂಡು ನೆರೆದ ಸ್ತ್ರೀಪುರುಷರೆಲ್ಲರೂ ಅಧೀರರಾಗಿ ಚಂಡೀಮಂಟಪಕ್ಕೇ ನಡೆದರು. ಅಷ್ಟೊಂದು ಜನರು ಏತಕ್ಕಾಗಿಯೋ ತಮ್ಮನ್ನು ಉತ್ಕಂಠೆಯಿಂದ ಕಾದಿರುವುದನ್ನು ನೋಡಿ, ವಂಶಲೋಚನರು ಮುಗಿಯುತ್ತ ಬಂದ ಪೂಜೆಯನ್ನು ಒತ್ತರದಿಂದ ಮುಗಿಸಿ ಹೊರಗೆ ಬಂದರು; ಪ್ರಶ್ನಾರ್ಥಕ ದೃಷ್ಟಿಯಿಂದ ಜನಜಂಗುಳಿಯನ್ನು ನೋಡಿದರು.

ಒಂದು ಹುರುಪು ಕೆಮ್ಮಿ ವಿಶುಕಾಕಾ ಮಾತಿಗೆ ಮೊದಲು ಮಾಡಿದ: "ಆಃ, ಈ ಸಲ ಮಾರ್ಗಶಿರದಲ್ಲಿಯೇ ಏನು ಚಳಿ ಬಿದ್ದಿದೆ, ಇನ್ನು ಪೌಷ್ಯದಲ್ಲಿ ಅದೆಷ್ಟು ಬೀಳುವುದೋ ಏನೊ.—ಅಲ್ಲ, ನಿಮಗಿನ್ನೂ ಗೊತ್ತಾಗಿಲ್ಲವೆ?"

"ಏನು, ಏನು ಗೊತ್ತಾಗುವುದು?"

ವಿಶುಕಾಕಾನಿಗೆ ಭಯಂಕರ ಕೆಮ್ಮು ಬಂದಿತು, ಉಸಿರೇ ಕಟ್ಟುವಂತಾಯಿತು. ಕೆಮ್ಮಿನ ನಡುನಡುವೆ ಒಂದೊಂದೇ ಶಬ್ದವನ್ನು ನೂಕುತ್ತ "ಏ-ಹಾರು-ನೀನೇ ಹೇಳು" ಎಂದು ಅಭಿನಯದ ಸಹಾಯದಿಂದ ತಿಳಿಸಿದ.

“ ಹಿಮಿ, ಗೋವರ್ಧನ, ಅವನ ಮಗಳು ಮೂವರೂ ಊರಲ್ಲಿ ಕಾಣಲೊಲ್ಲರು. ಗೋವರ್ಧನ ಹಿಮಿಯನ್ನು ಕಟ್ಟಿಕೊಂಡು ಓಡಿಹೋಗಿದ್ದಾನೆಂದು ಕಾಣುತ್ತದೆ. ವಸ್ತು ಒಡವೆಗಳೂ ಹೋಗಿರಲಿಕ್ಕೆ ಸಾಕು. ಪೋಲಿಸರಿಗೆ ತಿಳಿಸಬೇಕಾದೀತು....”

ಸಿಡಿಲೆರಗಿ ವಂಶಲೋಚನರ ಹೃದಯ ಒಡೆಯುವಂತಾಯಿತು. ಅವರ ಮುಖ ಕಾಡಿಗೆ ಬಳಿದಂತೆ ಕಪ್ಪಿಟ್ಟಿತು. ಚಂಚಲಚಕಿತ ದೃಷ್ಟಿಯನ್ನು ಬಂದವರೆಲ್ಲರ ಮುಖದ ಮೇಲೂ ತಿರುಗಿಸಿದರು,—ಊರಿನ ಪ್ರತಿಯೊಂದು ಮನೆಯ ಒಬ್ಬರಿಲ್ಲೊಬ್ಬರು ಬಂದಿದ್ದರು ತಮ್ಮ ಮನೆಯ ದಾಸಿಯೂ ಇದ್ದಳು. ಅರ್ಥಾತ್ ಈ ಕರ್ಕಶವಾದ ವಾರ್ತೆ ಸುಳ್ಳಿರಲಾರದು, ತಪ್ಪಿರಲಾರದು, ನಗೆ-ಚಾಟಿಕೆಯಾಗಿರಲಾರದು— ನಿದಾರುಣವಾದ ಸತ್ಯ! ಹೈಮವತಿ ನಿನ್ನೆ ಇಡೀ ದಿನ ವಿಷಣ್ಣಭಾವದಿಂದಿದ್ದುದು, ರಾತ್ರಿ ತಮ್ಮ ಕಾಲೊತ್ತಲು ಬಂದುದು ವಂಶಲೋಚನರ ಸ್ಮರಣೆಗೆ ಬಂದಿತು. ನೀರೊಳಗೆ ಮುಳುಗಿ ಸಾಯುತ್ತಲಿರುವ ಮನುಷ್ಯನಿಗೆ ಇಡೀ ಜೀವನದಲ್ಲಿಯ ಘಟನೆಗಳು ಚಲಚ್ಚಿತ್ರದಂತೆ ಮನಶ್ಚಕ್ಷುವಿನ ಮುಂದೆ ಹಾಯ್ದು ಹೋಗುವವು ವಂಶಲೋಚನರ ಸ್ಥಿತಿಯೂ ಹಾಗೆಯೇ ಆಯಿತು. ಅವರ ಜೀವನದಲ್ಲಿಯ ಈ ಚರಮ-ಪರಮ ದುರ್ದಿನದಲ್ಲಿ ಒಂದು ನಿಮಿಷದೊಳಗೆ, ಎಷ್ಟೋ ದಿನಗಳ ಅದೆಷ್ಟೋ ಸಾಮಾನ್ಯ-ತುಚ್ಛ ಸಂಗತಿಗಳು ಅವರ ತಲೆಯಲ್ಲಿ ಸುಳಿದವು. ಸಂಭವಿಸಿದಾಗ ಏನೂ ಅರ್ಥವಿಲ್ಲದವೆಂದು ತೋರಿದ ವಿಷಯಗಳು ಈಗ ಅರ್ಥಪೂರ್ಣವಾಗಿ ತೋರತೊಡಗಿ-ದವು—ಗೋವರ್ಧನನು ತನ್ನ ಜೀವದ ಪರಿವೆಯಿಲ್ಲದೆ ಹೈಮವತಿಯನ್ನು ರಕ್ಷಿಸಿದುದೇಕೆ? ಅತ್ಯಂತ ಮನಸುಗೊಟ್ಟು ಅವಳು ಅವನ ಸೇವೆ ಮಾಡಿದು-ದೇಕೆ? ಅವಳು ಅವನನ್ನು ಮನೆಯಲ್ಲಿ ಇರಿಸಿಕೊಳ್ಳುವುದಕ್ಕೆ ಆತುರಳಾಗಿದ್ದುದು ಏಕೆ? ಅನ್ನಪೂರ್ಣೆ ಹೈಮವತಿಗೆ ಅಪ್ಪ ಎನ್ನುತ್ತಿದ್ದುದೇಕೆ ? ಅವಳು ಗುರುತು ಪರಿಚಿತಿ ಇಲ್ಲದ ಹೆರವರ ಮಗುವನ್ನು ಅಷ್ಟು ಲಲ್ಲೆಗೈಯುತ್ತಿದ್ದುದೇಕೆ? ಎಂದು ಯಾವ ಮಾತಿನಿಂದ ಗೋವರ್ಧನ-ಹೈಮವತಿಯರ ದೃಷ್ಟಿಸಂಗಮವಾಗಿ ಇಬ್ಬರ ಕಣ್ಣುಗಳೂ ಕಳೆಗೊಂಡಿದ್ದವು?— ಅವುಗಳಲ್ಲಿ ನಗೆಮಲ್ಲಿಗೆಗಳು ಅರಳಿದ್ದವು? ಯಾವಾಗ ಯಾರು ಯಾವ ಮಾತನ್ನಾಡಿದರು?....ಎಲ್ಲವೂ ಈಗ ಅವರ ಸ್ಮೃತಿಪಥದಲ್ಲಿ ಸುಳಿದು ಒಂದು ನಿಶ್ಚಿತಾರ್ಥವನ್ನು ಸೂಚಿಸ

ತೊಡಗಿದವು. ಅವರ ಮುಖವು ದುಃಸಹವಾದ ವೇದನೆಯಿಂದ ಒಮ್ಮೆಲೆ ಬಣ್ಣಗೆಟ್ಟಿತು. ಆದರೆ ಮರುಕ್ಷಣದಲ್ಲಿ ಅವರು ಹೋ ಹೋ ಎಂದು ನಕ್ಕುಬಿಟ್ಟರು. ಆ ನಗೆ ಹಿಸ್ಟೀರಿಯದ ನಗೆ, ಅದಕ್ಕೆ ಕೊನೆಯೇ ಇಲ್ಲ; ಅನಂತಕಾಲದ ವರೆಗೂ ಧ್ವನಿತವಾಗುತ್ತಲೇ ಇರುವುದೇನೊ. ಅದನ್ನು ತಡೆಯುವ ಶಕ್ತಿ ವಂಶಲೋಚನರಿಗಿರಲಿಲ್ಲ.

ಅವರ ಆ ಭಯಂಕರ ನಗೆಯಿಂದ ಎಲ್ಲರೂ ಅವಾಕ್ಕಾದರು. ನಕ್ಕು ನಕ್ಕು ದಮ್ಮನೆ ದಣಿದು ತೇಕುತ್ತ ತೇಕುತ್ತ ವಂಶಲೋಚನರೆಂದರು: "ನೀವೆಲ್ಲರೂ ಹೇಗೆ ಮೋಸಹೋದಿರಿ ? ಈಗ ನಿಮಗೆ ತಿಳಿಯಿತೆಂದು ಕಾಣುತ್ತದೆ. ಆಂ! ಹಾ ಹಾ ಹಾ!"

ಜನರು ಹೇಗೆ ಮೋಸಹೋದರೆಂಬುದು ತಿಳಿಯದು. ಆದರೆ ವಂಶಲೋಚನರ ಹುಚ್ಚುನಗೆಯಿಂದ, ತಾವು ಇಷ್ಟು ಆಸ್ಥೆಯಿಂದ ಬಂದ ಉದ್ದೇಶವು ಸಾರ್ಥಕವಾಗಲಿಲ್ಲವೆ? ಗೋವರ್ಧನ ಹೈಮವತಿಯರು ಇಲ್ಲಿಯೇ ಎಲ್ಲಿಯಾದರೂ ಇದ್ದಿರಬಹುದೆ ? ವಂಶಲೋಚನರೇ ಅವರನ್ನೆಲ್ಲಿಗಾದರೂ ಕಳಿಸಿರಬಹುದೇ? ತಾವು ತಿಳಿದುಕೊಂಡುದೆಲ್ಲ, ಆಲೋಚಿಸಿದುದೆಲ್ಲ ಹುಸಿಹೋಯಿತೆ? ಎಂದು ಕುಂಠಿತರಾದ ಜನರು ಅವರು ನಗುವುದನ್ನೇ ನೋಡುತ್ತ ನಿಂತರು. ವಂಶಲೋಚನರ ರೀತಿಯನ್ನು ಕಂಡು ಆಗಂತುಕರು ಓಡಿಹೋಗಿ ಉಳಿದುಕೊಳ್ಳಬಹುದಾಗಿತ್ತು. ಆದರೆ ತಾವು ಇದರಲ್ಲಿ ಮೋಸ ಹೋದುದು ಹೇಗೆ ಎಂಬುದನ್ನು ತಿಳಿದುಕೊಳ್ಳದೆ ಯಾರೂ ಹೋಗಲಿಕ್ಕೊಲ್ಲರು.

ಕೊನೆಗೆ ಅಕ್ರೈತವನು ಕೇಳಿಯೇ ಬಿಟ್ಟ: "ಏನಾಗಿದೆ, ಸ್ವಲ್ಪ ಬಿಡಿಸಿ ಹೇಳಿರಿ ಮುಖ್ಯೈಕಾಕಾ."

ನಗೆಯೊಂದಿಗೆಯೆ ವಂಶಲೋಚನರು ಉತ್ತರವಿತ್ತರು: "ನಕ್ಕು ನಕ್ಕು ನನ್ನ ಹೊಟ್ಟೆ ಹುಣ್ಣಾಗುವಂತೆ ಮಾಡಿದಿರಿ ನೀವೆಲ್ಲರೂ. ಗೋವರ್ಧನನೊಡನೆ ಹೈಮವತಿಯ ಲಗ್ನವನ್ನು ನಿಶ್ಚಯಿಸಿ ನಾನೇ ಅವರನ್ನು ಕಲಕತ್ತೆಗೆ ಕಳಿಸಿದ್ದೇನೆ....ನೀವು ಹೇಗೆ ಮೋಸಹೋದಿರಿ ?....ಹಾಃ ಹಾಃ ಹಾಃ!"

ಎಲ್ಲರೂ ಸ್ತಂಭಿತರಾದರು. ಇದು ಸಂಭವವೆ ?

ವಂಶಲೋಚನರ ಕಣ್ಣುಗಳು ಕಂಬನಿಯಿಂದ ಮಿನುಗತೊಡಗಿದವು;

ನಗೆಯಲ್ಲಿ ಕಣ್ಣೀರನ್ನು ಬಚ್ಚಿಡುವುದು ಇನ್ನವರಿಗೆ ಅಸಾಧ್ಯವಾಯಿತು. ಆದರೂ ಪ್ರಯತ್ನದಿಂದ ನಗುತ್ತ ಅವರೆಂದರು: "ಉಃ, ನಕ್ಕು ನಕ್ಕು ನನ್ನ ಹೊಟ್ಟೆ ಕುಟ್ಟುಹಿಡಿಯಿತು; ಕಣ್ಣೊಳಗೆ ನೀರು ಬಂದವು....ಉಃ! ಇನ್ನು ನಗಲಾರೆ.."

ನಗೆಯ ಅಭಿನಯವಿನ್ನು ಆಗದ ಕೆಲಸವಾಗಿದ್ದರೂ ಅದನ್ನು ನಿಲ್ಲಿಸುವುದು ಅಸಾಧ್ಯವಾಗಿತ್ತು. ಆದುದರಿಂದ ವಂಶಲೋಚನರು ಕಂಬನಿಯನ್ನು ನಗೆಯಿಂದ ಹಿನ್ನೂಕಲು ಮತ್ತೂ ಪ್ರಯತ್ನಿಸತೊಡಗಿದರು.

ತರಲನ ಮಾವನೆಂದ: "ಕೀಳನಾದ ಭಾಸ್ಕರ ಬ್ರಾಹ್ಮಣನಿಗೆ ಮಗಳನ್ನು ಕೊಡುತ್ತಿದ್ದೀರಿ ದಾದಾ, ಮತ್ತೆ ನಮ್ಮ ತರಲ ಅವಳನ್ನು ಮದುವೆಯಾಗುತ್ತೇನೆಂದರೆ ಸಿಟ್ಟಿಗೆದ್ದು ಹಾಗೇಕೆ ಎತ್ತುಗಲ್ಲು ಹೊತ್ತುಗಲ್ಲು ಹಾಕಿದಿರಿ? ನಿಮ್ಮಿಂದ ಹುಡುಗ ಜೀವಕ್ಕೆರವಾದ."

ಮಾತು ವಂಶಲೋಚನರ ಮರ್ಮಕ್ಕೆ ತಾಗಿತು. ಅವರ ಮುಖವು ಮತ್ತೆ ಮ್ಲಾನವಾಯಿತು. ಅವರ ನಗೆ ಪಕ್ಕನೆ ಹರಿಗಡಿಯಿತು. ಕಂಬನಿಗೆ ದಾರಿಯಾಯಿತು. ಮರುಕ್ಷಣದಲ್ಲಿ ಅದನ್ನು ಹತ್ತಿಟ್ಟು ವಂಶಲೋಚನರೆಂದರು: "ತರಲನೇ ನನ್ನ ಕಣ್ಣನ್ನು ತೆರೆಯಿಸಿ ಹೋದ. ವಿಚಾರಮಾಡಿ ನೋಡಿದೆ-ಒಂದು ರೀತಿಯಲ್ಲಿ ಹೈಮವತಿ ಕುಮಾರಿಯೇ ಎಂದೆನಿಸಿತು; ಅವಳ ಮದುವೆಯನ್ನು ಮಾಡುವುದು ಅಗತ್ಯ, ಇಲ್ಲದೆ ಹೋದರೆ ಯಾವಾಗ ಯಾವ ಹುಡುಗರ ಕುಹಕದಿಂದ ಪಾಪಕಾಂಡ ಸಂಭವಿಸುವುದೋ ಏನೋ ಎಂದೆನಿಸಿತು. ನೋಡಿದೆ-ಗೋವರ್ಧನನ ಕುಲ ನಿಕೃಷ್ಟವಾದರೂ ಅವನ ಗುಣ, ಅವನ ಸ್ವಭಾವ ಒಳ್ಳೆಯವು; ಹೈಮವತಿಯನ್ನು ತನ್ನ ಜೀವದಾಸೆಯಿಲ್ಲದೆ ಸಂರಕ್ಷಿಸಿದ್ದ; ಅವನು ರಕ್ಷಿಸಿದ ವಸ್ತುವನ್ನು ಅವನಿಗೇ ಒಪ್ಪಿಸಿಬಿಟ್ಟೆ. ಹಹ್ಹಹಹ! ಕೆಟ್ಟದು ಮಾಡಿದೆನೆ? ನೀವೇನೆನ್ನುತ್ತೀರಿ ಹೇಳಿರಿ."

ಕಣ್ಣೀರನ್ನು ನಿವಾರಿಸುವುದಕ್ಕೆ ಪುನಃ ನಗೆ ಆವಶ್ಯಕವಾದುದರಿಂದ ವಂಶಲೋಚನರು ಒಮ್ಮೆ ಆರಂಭಿಸಿದ ಅಭಿನಯವನ್ನು ಹಾಗೆಯೇ ಮುಂದುವರಿಸಬೇಕಾಯಿತು.

ವಿಶುಕಾಕಾ ಕೆಮ್ಮನ್ನು ಕೊಂಚ ಅಂಕೆಯಲ್ಲಿ ತಂದುಕೊಂಡು ನುಡಿದ: "ರಾಮ ರಾಮ! ಘೋರ ಕಲಿ, ಘೋರ ಕಲಿ! ವಂಶನಿಗೆ ಇಂತಹ ಪಾಪಬುದ್ಧಿ ಹುಟ್ಟೀತೆಂದು ಯಾರಾದರೂ ಬಗೆದಿದ್ದರೆ? ಆ್ಯಂ, ನಡೆಯಿರಿ ನಡೆಯಿರಿ;

ಇಂತಹ ಮ್ಲೇಚ್ಛರೊಡನೆ ಸಂಬಂಧವಿಡುವುದಂತೂ ಒತ್ತಟ್ಟಿಗಿರಲಿ, ಇವರ ಮೋರೆ ನೋಡುವುದೂ ಮಹಾಪಾತಕ. ಇವರ ಗಾಳಿ ತಾಗಿದರೂ ಧರ್ಮವು ಕೆಟ್ಟುಹೋಗುವುದು."

ಹೋಗುಹೋಗುತ್ತ ಹಾರು ನುಡಿದ: "ಈ ದುರ್ಬುದ್ಧಿ ಎಲ್ಲಿಂದ ಹುಟ್ಟಿತು ಬಾಬೂ ನಿಮಗೆ? ಕೊನೆಗಾಲದಲ್ಲಿ, ಮುಪ್ಪಿನಲ್ಲಿ ನಮ್ಮನ್ನೆಲ್ಲ ಬಿಟ್ಟಿರಿ, ಇಷ್ಟು ದಿನಗಳ ಸಂಬಂಧವನ್ನು ಕಡಿದುಹಾಕಿರಿ."

ವಂಶಲೋಚನರು ನಕ್ಕು ನುಡಿದರು: "ಏನು ಮಾಡುವುದಪ್ಪ! ಮಗಳ ಸುಖವನ್ನು ನೋಡಲೋ, ಏನು ನಿಮ್ಮ ಸಂಬಂಧವನ್ನು ನೋಡಲೋ ?"

ಬಡಿಗೆಯ ಮೇಲೆ ಭಾರಹಾಕಿ ಕೆಳಗಿಳಿಯುತ್ತಿಳಿಯುತ್ತ ವಿಶುಕಾಕಾ, "ನೀವು ಸತ್ತರೆ ಹೊರುವವರು ಯಾರು ?" ಎಂದ.

ವಂಶಲೋಚನರು ಮತ್ತೂ ನಗುತ್ತಲೇ ಮಾತನಾಡಿದರು: "ಓಃ ಸಾವು! ನಾನೇನು ಲಗೂ ಸಾಯುವುದಿಲ್ಲ ಕಾಕಾ. ಎಂದಾದರೂ ಸತ್ತರೆ, ಬಿಟ್ಟು ಹೋದ ಈ ಪರಟಿಯನ್ನು ಯಾರು ಎಳೆದು ಹಾಕುವರೆಂಬ ವಿಚಾರಕ್ಕಿಂತ ಹೆಚ್ಚಿನ ವಿಷಯವನ್ನು ಪರಕಾಲದಲ್ಲಿ ಪಡೆಯುವೆನು."

"ಪರಕಾಲ ಪರಕಾಲ! ಇನ್ನೂ ಪರಕಾಲವೆಂಬುದೊಂದು ಉಂಟೆ ? ಇಹಪರ ಎರಡಕ್ಕೂ ಎರವಾಗಿ ಕುಳಿತಿದ್ದೀರಿ. ಗಂಡಸತ್ತ ಮಗಳನ್ನು ಮರಳಿ ಮದುವೆ ಮಾಡಿಕೊಟ್ಟವರಿಗೆ ನರಕದೊಳಗೂ ಎಡೆಯಿಲ್ಲ" ಎಂದೆನ್ನುತ್ತ ಖಟಖಡ ಕೈಬಡಿಗೆಯನ್ನಿಕ್ಕುತ್ತ ವಿಶುಕಾಕಾ ಹೊರಟ.

ನಗೆಯಿಂದ ಮೈಯನ್ನು ಅದುರಿಸುತ್ತ ವಂಶಲೋಚನರೆಂದರು: "ನರಕ ದೊಳಗೆ ಸ್ಥಳವು ಸಿಕ್ಕುವುದು ಶಕ್ಯವೇ ಇಲ್ಲ; ಅಲ್ಲಿ ನಿಮ್ಮಂಥವರ ಗವುಜೇ ಗವುಜು. ನಾನು ಪಡೆಯುವ ಸ್ಥಳದಲ್ಲಿ ವಿದ್ಯಾಸಾಗರರಂತಹ ಅನೇಕ ಮಹಾ ಪುರುಷರ ಸಮಾಗಮವು ಲಭಿಸುವುದು........."

ಮಾತಿನೇಟು ಕೊಟ್ಟು ಬಂದ ಜನರನ್ನು ಓಡಿಸುವ ಪ್ರಯತ್ನ ಮಾಡಿದರು ವಂಶಲೋಚನರು. ವಿಶುಕಾಕಾ ತಮ್ಮ ಶಬ್ದಕೋಶದೊಳಗಿನ ಬಯ್ಗುಳನ್ನೆಲ್ಲ ಪ್ರಯೋಗಿಸುತ್ತ ಏನೇನೋ ಎನ್ನುತ್ತ ನಡೆದ.

ಅಲ್ಲಿಂದ ಒಬ್ಬೊಬ್ಬರೇ ಕಣ್ಮರೆಯಾದ ಹಾಗೆ ವಂಶಲೋಚನರ ನಗೆ ಶೋಕವಾಗಿ ಹೊರಹೊಮ್ಮತೊಡಗಿತು. ಎಲ್ಲರೂ ಹೋದೊಡನೆ ಅವರ

ಅವರುದ್ಧ ವೇದನೆ ಧಾರೆಗಟ್ಟಿತು. ಆಗ ಕಾಲಿಯ ಕಡೆಗೆ ತಿರುಗಿ ಕೈಜೋಡಿಸಿಕೊಂಡು ನಿಂತು ಕಣ್ಣೀರು ಸುರಿಸುತ್ತ ಆತ್ಮನಿವೇದನೆಯಲ್ಲಿ ನಿರತರಾದರು.—ತಿರುಗಿ ಇದೊಂದು ಹೊಸಪೆಟ್ಟು ತಾಯಿ. ನಾನು ಮೃತ್ಯುಭಯವನ್ನು ಗೆದ್ದಿದ್ದೇನೆ, ದಾರಿದ್ರ್ಯದ ಕಷ್ಟಗಳು ನನ್ನನ್ನು ವಿಚಲಿತಗೊಳಿಸಲಾರವು ಎಂಬ ಅಹಂಕಾರವು ನನ್ನ ಮನಸಿನಲ್ಲಿ ಮನೆ ಮಾಡಿತ್ತು. ಅಸುರದರ್ಪವಿನಾಶಿನಿಯಾದ ನೀನು ಬೇರೊಂದು ಬದಿಯಲ್ಲಿ ಆಘಾತಿಸಿ ನನ್ನ ದರ್ಪವೆಲ್ಲ ಹುರುಳಿಲ್ಲ-ದುದೆಂದು ತೋರಿಸಿದೆ ಒಂದೇ ಹೊಡೆತಕ್ಕೆ ಕುಲಗರ್ವ, ವಂಶಗರ್ವ, ಕನ್ಯಾ-ಗರ್ವಗಳು ಹುಡಿಹುಡಿಯಾದವು. ಎಲ್ಲವೂ ಹೋಯಿತು, ಎಲ್ಲವೂ ಹೋಗು-ವುದೇ, ಉಳಿಯುವವಳು ನೀನೊಬ್ಬಳೇ. ಆದರೆ ಜನನೀ, ನನಗಿದನ್ನು ತಡೆದುಕೊಳ್ಳಲು ಎಷ್ಟೂ ಶಕ್ತಿಯಿರಲಿಲ್ಲ. ಎಂತಹ ಬಲವಾದ ಪೆಟ್ಟು ತಗಲಿತಮ್ಮಾ! ಉಃ!

ಆಗ ವಂಶಲೋಚನರ ಮನಸು ಶಾಂತವಾಯಿತು. ಜನರಾಡಿದ ಮಾತು ದಿಟವೋ ಸಟೆಯೋ ಎಂಬುದನ್ನು ತಾವು ಪ್ರಮಾಣಿಸಿ ನೋಡಿಲ್ಲವೆಂಬುದು ಅವರಿಗೆ ನೆನಪಾಯಿತು. ಲಗುಬಗೆಯಿಂದ ಮನೆಯೊಳಗೆ ಹೋದರು. ಕೋಣೆ ಕೋಣೆಯಲ್ಲಿಯೂ ಹೈಮವತಿಯ ಕುರುಹುಗಳಿದ್ದವು, ಅವಳು ಮಾತ್ರ ಇರಲಿಲ್ಲ. ಮುದುಕನ ಮನಸಿನಲ್ಲಿ ಹಾಹಾಕಾರವೆದ್ದಿತು. ಆದರೆ ಅವರು ತಮ್ಮ ಮನಸಿಗೆ ಛೀಹಾಕಿ ಬುದ್ಧಿ ಹೇಳಿದರು—ಮತ್ತಿನ್ನೂ ಮೋಹವೆ!

ಹಾಳು ಮನೆಯೊಳಗಿನ ದೆವ್ವನಂತೆ ವಂಶಲೋಚನರು ಎಲ್ಲ ಕೋಣೆ-ಗಳನ್ನೂ ಅಲೆದರು. ಒಂದು ಕಡೆ ಮಾತ್ರ ಹೋಗುವುದಾಗಲಿಲ್ಲ—ಗೋವ-ರ್ಧನನಿರುತ್ತಿದ್ದ ಕೋಣೆಯಲ್ಲಿ. ಅದರ ಮುಂದೆ ಹಾಯುತ್ತಿದ್ದಾಗ ಅವರು ಗರ್ಜಿಸಿದರು— ಮಾನಗೇಡಿ, ಕೃತಘ್ನ, ನೀಚ, ಚೆಲೋ ಪ್ರತಿಫಲ ಕೊಟ್ಟಿಯಲಾ!

ಮಗಳೇ ತೊರೆದುಹೋದ ಬಳಿಕ ಮತ್ತೆ ಯಾರಿಗೇನೆನ್ನುವುದಿದೆ? ಎಂದು ಮರುಕ್ಷಣದಲ್ಲಿ ಅವರಿಗೆನಿಸಿತು. ಆಗವರು ಗೋವರ್ಧನನ ಕೋಣೆಯನ್ನು ಪ್ರವೇಶಿಸಿ ನೋಡಿ ಅತ್ಯಂತ ಅಚ್ಚರಿಗೊಂಡರು. ಅವನು ತನ್ನ ಬಾಕ್ಸ-ಬ್ಯಾಗ್ ಎಲ್ಲವನ್ನೂ ಒಗೆದುಹೋಗಿದ್ದ. ಹಾಗಾದರೆ ಅವರು ಏನನ್ನು ತೆಗೆದುಕೊಂಡು ಹೋಗಿದ್ದಾರೆ? ಗೋವರ್ಧನನು ತನ್ನ ಸರ್ವಸ್ವವನ್ನು ತ್ಯಾಗ

ಮಾಡಿ ವಂಶಲೋಚನರ ಸರ್ವಸ್ವವನ್ನು ಅಪಹರಿಸಿದ್ದ. ಅವನ ಅಪರಾಧ ಅಕ್ಷಮ್ಯವೇ. ಆದರೂ ಅವನ ನಿರ್ಲೋಭಿತನದ ಬಗ್ಗೆ ವಂಶಲೋಚನರಲ್ಲಿ ಗೌರವಶ್ರದ್ಧೆಗಳು ಹೆಚ್ಚಿದವು. ಮೂವರೂ ಉಟ್ಟ ಬಟ್ಟೆಯಿಂದಲೇ ಹೊರಟು ಹೋಗಿದ್ದರು. ಅವರ ಕ್ರೋಧವು ಕ್ರಮವಾಗಿ ವಿಸ್ಮಯವಾಗಿ ಮಾರ್ಪಟ್ಟಿತು.

೧೪

ಗೋವರ್ಧನನು ಹೈಮವತಿಯೊಂದಿಗೆ ಕಲಕತ್ತೆಗೆ ಹೋಗಿ ಒಂದು ಧರ್ಮ ಶಾಲೆಯಲ್ಲಿ ಇಳಿದುಕೊಂಡು ಮನೆಯನ್ನು ಹುಡುಕಲಾರಂಭಿಸಿದ. ಅಲ್ಲಿ ಸ್ವತಂತ್ರವಾದ ಸಣ್ಣ ಮನೆ ಸಿಕ್ಕುವುದು ದುಷ್ಕರ. ನಾಲ್ಕಾರು ಕುಟುಂಬಗಳು ಒಟ್ಟಿಗೆ ಒಳಒಕ್ಕಲಾಗಿರುವಂತಹ ಮನೆ ಸಿಕ್ಕುತ್ತವೆ. ಆದರೆ ಈತ ವಿಧವಾ ವಿವಾಹ ಮಾಡಿಕೊಳ್ಳತಕ್ಕವನು, ಅದು ಗೊತ್ತಾಯಿತೆಂದರೆ ಯಾವ ಹಿಂದು ಕುಟುಂಬವೂ ಇವರನ್ನು ಒಟ್ಟಿಗಿಟ್ಟುಕೊಳ್ಳಲಾರದು. ಹೈಮವತಿ ಕುಲಗೆಟ್ಟು ಓಡಿ ಬಂದಿರುವುದು ತಿಳಿದರಂತೂ ತೀರಿಯೇ ಹೋಯಿತು—ನಿಂದೆ, ಕುಚೇಷ್ಟೆ, ತಿರಸ್ಕಾರಗಳಿಗೆ ಪರಿಮಿತಿಯೇ ಇರುವುದಿಲ್ಲ. ಅವಳನ್ನು ಈ ತೆರದ ಅವಸ್ಥೆಗೆ ಈಡುಮಾಡುವ ಮನಸು ಗೋವರ್ಧನನಿಗೆ ಎಷ್ಟೂ ಇಲ್ಲ. ಪ್ರತ್ಯೇಕವಾದ ದೊಡ್ಡ ಮನೆಯನ್ನು ಬಾಡಿಗೆಗೆ ಹಿಡಿಯುವಷ್ಟು ಅವನು ಸ್ಥಿತಿವಂತನೂ ಆಗಿರ ಲಿಲ್ಲ. ಅವನ ಹೊಲದ ಉತ್ಪನ್ನವು ಅಂತೂ ಇಂತೂ ಅವರ ಹೊಟ್ಟೆಬಟ್ಟೆ ಗಳಿಗೆ ಸಾಕಾಗುವಂತಿತ್ತು. ಅವನು ಹೆಚ್ಚಾಗಿ ಅವಲಂಬಿಸಿದುದು ಚಿತ್ರಕಲಾ-ವೃತ್ತಿಯನ್ನೆ. ಈಗಳಂತೂ ದೇಶಾಂತರ ಬಂದಿದ್ದಾನೆ. ಇನ್ನೂ ಯಾವ ಉದ್ಯೋಗವೂ ಇಲ್ಲ. ವಂಶಲೋಚನರ ದೇವೀಮೂರ್ತಿಗೆ ಬಣ್ಣವಿತ್ತು ಗಳಿಸಿ ದುದೆಷ್ಟೋ ಅಷ್ಟೇ ಅವನ ಬಂಡವಾಳ. ವಿಧವಾ ವಿವಾಹವನ್ನು ಮಾಡಿ ಕೊಂಡರೆ ಯಾರೂ ಅವನಿಗೆ ಆ ಕೆಲಸವನ್ನು ಕೊಡಲಾರರು—ಅವನು ದೇವ ರನ್ನು ಮುಟ್ಟಬಹುದೆ? ಇದ್ದ ಆ ಒಂದೇ ಒಂದು ಉಪಾರ್ಜನೆಯ ಮಾರ್ಗವೂ ಕಟ್ಟಾಗುವುದು ಈ ವಯಸಿನೊಳಗೆ ಹೊಸದೊಂದು ಉಪಾಯವನ್ನು ಕಲಿತು, ಹುಡುಕಿಕೊಳ್ಳಬೇಕಾಗುವುದು. ಇಷ್ಟಾಗಿಯೂ ಅದರ ಫಲಿತಾಂಶದ ಬಗ್ಗೆ ನಿಶ್ಚಿತತೆಯಿಲ್ಲ; ನಿರ್ವಾಹಕ್ಕೆ ಸಾಕಷ್ಟು ಧನಾರ್ಜನೆಯಾದೀತೋ ಇಲ್ಲವೋ ಹೇಳಲಿಕ್ಕಾಗುವುದಿಲ್ಲ.

ಅವರಿಗೆ ಅನುಕೂಲವಾದ ಮನೆ ಸಿಕ್ಕಲಿಲ್ಲ. ಕೊನೆಗೆ ಗೋವರ್ಧನನು ಸಧ್ಯ ಒಂದು ದೊಡ್ಡ ಮನೆಯನ್ನೇ ಹಿಡಿಯುವುದು, ತಮ್ಮ ಮದುವೆಯಾದ ಬಳಿಕ ಅದರಲ್ಲಿ ಒಂದೆರಡು ಕೋಣೆಗಳನ್ನು ಬಾಡಿಗೆಗೆ ಕೊಡಬಹುದು, ಆ ಜನ ಹೈಮವತಿಯನ್ನು ತನ್ನ ಹೆಂಡತಿಯೆಂದೇ ತಿಳಿಯುವರು, ಯಾವ ಉಪ-ದ್ರವವೂ ಆಗುವುದಿಲ್ಲ ಎಂದು ಯೋಚಿಸಿದ. ಆ ಮೇರೆಗೆ ಒಂದು ಮನೆಯನ್ನು ಹಿಡಿದು ಇದ್ದುದಾಯಿತು.

ಗೋವರ್ಧನನದು ನೂತನ ಸಂಸಾರ. ಎಲ್ಲವನ್ನೂ ಹೊಸದಾಗಿ ಜೋಡಣೆ ಮಾಡಬೇಕು. ಅದಕ್ಕೆ ಬೇಕಾದಷ್ಟು ಬಂಡವಾಳವಿಲ್ಲ. ಕೈಗಡ-ವನ್ನು ದೊರಕಿಸಲು ಕಲಕತ್ತೆಯಲ್ಲಿ ಪರಿಚಯದವರು ಯಾರೂ ಇಲ್ಲ. ಉಪಾ-ರ್ಜನೆಯ ಉಪಾಯವನ್ನು ಅರಸುವಷ್ಟು ಅವಕಾಶವಾಗಲಿ ವ್ಯವಧಾನವಾಗಲಿ ಅವನಿಗಿರಲಿಲ್ಲ. ಚಳಿಗಾಲ; ಹೈಮವತಿ ಉಟ್ಟ ತೊಟ್ಟ ಬಟ್ಟೆಯಿಂದಲೇ ಹೊರಟುಬಂದಿದ್ದಾಳೆ; ಭಾರ ಹೆಚ್ಚಾಗುವುದೆಂದು ಗೋವರ್ಧನನು ತನ್ನ ಹಾಗು ಅನ್ನಪೂರ್ಣೆಯ ಕೆಲವೇ ಬಟ್ಟೆಗಳನ್ನು ತಂದಿದ್ದಾನೆ; ಈಗ ಮೊಟ್ಟ ಮೊದಲು ಎಲ್ಲರಿಗೂ ಕೆಲವಾದರೂ ಬಟ್ಟೆಗಳನ್ನು ಕೊಳ್ಳುವುದು ಅಗತ್ಯ. ಕೆಲ ವೊಂದು ಪಾತ್ರೆ ಪಡಗಗಳನ್ನು ತರಬೇಕು. ಈಗೊಂದು ಸಲ ಗೋವರ್ಧನನು ತಮ್ಮ ಊರಿಗೆ ಹೋಗಿ ಬಂದಿದ್ದರೆ ಸ್ವಲ್ಪ ಸಾಮಾನುಗಳನ್ನೂ ಒಂದಿಷ್ಟು ಹಣ ವನ್ನೂ ಕೂಡಿಸಿ ತರಬಹುದಿತ್ತು. ಆದರೆ ಇಲ್ಲಿ ಹೈಮವತಿಯನ್ನೊಬ್ಬಳನ್ನೇ ಬಿಟ್ಟು ಕದಲುವಂತಿರಲಿಲ್ಲ. ಒಮ್ಮೆ ಹೋಗಿಯಂತೂ ಬರಲೇಬೇಕು; ಮೊದಲೇ ಹೋಗುವುದೇ ಮದುವೆಯ ಕೆಲಸ ಮುಗಿಸಿಕೊಂಡು ಹೋಗುವುದೇ ಎಂಬುದೂ ಒಂದು ಸಮಸ್ಯೆ.

ದೊಡ್ಡ ಪೇಟೆಯೊಳಗೆ ತಮ್ಮೂರಿನವನೊಬ್ಬನ ಕಿರಾಣಿಯಂಗಡಿಯಿರು ವುದು ಗೋವರ್ಧನನಿಗೆ ಗೊತ್ತಾಯಿತು. ಅವನ ಹತ್ತಿರ ಹೋಗಿ ಗೋವ-ರ್ಧನನು ಬಾಯಿ ತೆಗೆದ. " ನನಗೆ ಐದಾರು ನೂರು ರೂಪಾಯಿ ಬೇಕಾಗಿವೆ. ದತ್ತ. ನನ್ನ ಹೊಲಮನೆಗಳನ್ನು ಅಡವಿಟ್ಟುಕೊಂಡಾಗಲಿ ಕೊಂಡುಕೊಂಡಾ ಗಲಿ ಅಷ್ಟು ಹಣವನ್ನು ಕೊಟ್ಟರೆ ದೊಡ್ಡ ಉಪಕಾರವಾಗುವುದು."

ಅದಕ್ಕೆ ದತ್ತನು ಹೇಳಿದ: " ಹೊಲಮನೆ ಮಾರುವುದುಂಟೆ? ಅಡವೂ

ಇಡಬೇಕಾಗಿಲ್ಲ. ನೀನು ಸರಳ ಮನುಷ್ಯನೆಂಬುದು ಊರೊಳಗೆ ಯಾರಿಗೇನು ಗೊತ್ತಿಲ್ಲವೆ? ಒಬ್ಬರ ಒಂದು ಕಾಸನ್ನೂ ಮುಟ್ಟುವವನಲ್ಲ, ಮುಳುಗಿಸುವವ ನಲ್ಲ ನೀನು. ಹಣವನ್ನು ಒಯ್ಯಿ. ನೆನಪಿಗೆಂದು ಪರಮೇಶ್ವರಿ ನೋಟು ಬರೆದು ಕೊಡು, ಅಷ್ಟೆ."

ಇಷ್ಟು ಸಹಜವಾಗಿ ಹಣ ಸಿಕ್ಕುದಕ್ಕೆ ಗೋವರ್ಧನನು ಆನಂದಿತನಾದ. ಅಂದು ಸಂಜೆಗೇ ಸಂಸಾರ ಹೂಡಲು ಬೇಕಾಗುವ ಸಾಮಾನುಗಳನ್ನು ಕೊಂಡು ಎಕ್ಕದ ಮೇಲೆ ಹೇರಿಕೊಂಡು ಮನೆಗೆ ಹೋದ. ಹೈಮವತಿಗಾಗಿ ಒಂದು ಹಾರ, ಒಂದು ಜೊತೆ ಡೂಲು, ಒಂದು ಜೊತೆ ಬಂಗಾರ ಬಳೆಗಳನ್ನೂ ಒಯ್ದ. ಮಾನಮುಚ್ಚಿಕೊಳ್ಳುವುದಕ್ಕಾಗಿ ಹೈಮವತಿ ಮುತ್ತೈದೆಯೆಂದೇ ಜನಕ್ಕೆ ಪರಿಚಿತಳಾಗಬೇಕು!

ಸಾಮಾನುಗಳನ್ನು ಅವನೊಬ್ಬನೇ ಮನೆಯೊಳಗೆ ಒಯ್ದೊಯ್ದು ಹಾಕಿದ. ಹೈಮವತಿ ಸುಮ್ಮನೆ ನೋಡುತ್ತ ಕುಳಿತಿದ್ದಳು. ಎದ್ದು ಹೋಗಿ ನೆರವಾಗುವುದು ಅವಳಿಗೆ ಅಸಾಧ್ಯವಾಯಿತು. ಎಲ್ಲ ಸಾಮಾನುಗಳನ್ನು ಮೇಲಿನ ಕೋಣೆಯಲ್ಲಿಟ್ಟು, ಒಂದು ಜೊತೆ ಬಟ್ಟೆಯನ್ನು ಕೈಯಲ್ಲಿ ತೆಗೆದು ಕೊಂಡು ಬಂದು ಅವಳ ಹತ್ತಿರ ಇರಿಸಿ, ಲಜ್ಜಾಮಿಶ್ರಿತ ಹಾಸ್ಯದೊಡನೆ ಗೋವರ್ಧನನೆಂದ: "ಇವು ನಿನ್ನ ಬಟ್ಟೆ ಅಕ್ಕಾಜೀ."

ಮುತ್ತೈದೆಯರ ಬಟ್ಟೆಗಳು. ಅವಳ ಮುಖ ಕೆಂಪಾಯಿತು. ತಾನು ವಿಧವೆ; ಇಷ್ಟು ದಿನ ಬಿಳಿಯ ಬಟ್ಟೆ ಉಟ್ಟವಳು. ಈಗ ಸಧವೆಯ ಸೋಗನ್ನು ಹಾಕಬೇಕಾಗಿದೆ. ಹೈಮವತಿ ಲಜ್ಜೆಯಿಂದ ಕುಂಠಿತೆಯಾಗಿ ಮುಖವನ್ನು ತಗ್ಗಿಸಿ, ಅಲ್ಲಿಂದ ಕಾಲ್ತೆಗೆಯುವ ಉದ್ದೇಶದಿಂದ ಗಡಿಬಿಡಿಯಿಂದೆದ್ದಳು. ಅವಳ ಭಾವಭಂಗಿಯನ್ನು ಕಂಡು ಗೋವರ್ಧನನೂ ಸಂಕುಚಿತನಾದ. ಅವಳಿಗಾಗಿ ಆಭರಣಗಳನ್ನೂ ತಂದಿದ್ದ; ಅವನ್ನವಳಿಗೆ ತೋರಿಸಲಿಕ್ಕಾಗದೆ ಹೋಯಿತು.

ಆಭರಣಗಳ ಮೇಲೆ ಸುತ್ತಿದ್ದ ನೀಲಿಯ ಕಾಗದ ಅನ್ನಪೂರ್ಣೆಯ ಮನ ವನ್ನು ಸೆಳೆಯಿತು. ಕುತೂಹಲದಿಂದ ಮಡಿಕೆಯನ್ನು ಬಿಡಿಸಿ ನೋಡಿ ಆನಂದ ದಿಂದ ಗಟ್ಟಿಯಾಗಿ ಕೇಳಿದಳು: "ಇವು ಯಾರಿಗಪ್ಪ? ನನಗೇನು?"

ಗೋವರ್ಧನನು ಅಪ್ರತಿಭನಾದ. ಹೈಮವತಿಯ ಕಡೆಗೆ ನೋಡದೆ

ಅವನು ಹೇಳಿದ: "ಇಷ್ಟು ದೊಡ್ಡ ಆಭರಣ ನಿನಗೆ ಬರುವುದಿಲ್ಲ ಅನೂ. ನಿನಗೆ ಎಷ್ಟು ಬೇಕಾದಷ್ಟು ಆಭರಣಗಳಿವೆ, ಊರಿಗೆ ಹೋಗಿ ತಂದುಕೊಡುತ್ತೇನೆ."

ಹೈಮವತಿ ಆಭರಣಗಳನ್ನೊಮ್ಮೆ ನಿರೀಕ್ಷಿಸಿ ಅಲ್ಲಿಂದ ಹೊರಟು ಹೋದಳು. ಅನ್ನಪೂರ್ಣೆ ಮತ್ತೆ ಪ್ರಶ್ನಿಸಿದಳು: "ಹಾಗಾದರೆ ಇವನ್ನು ಯಾರಿಗೆ ತಂದೆ ಅಪ್ಪಾ?"

"ಇವು ನಿಮ್ಮ ಅವ್ವನ ಆಭರಣ," ಮೆಲುದನಿಯಲ್ಲಿ ಗೋವರ್ಧನನು ಉತ್ತರವಿತ್ತ.

ಅವಳು ನಂಬಲಿಲ್ಲ. ನಕ್ಕು ಪ್ರತಿವಾದಿಸಿದಳು: "ಹೋಗೋ, ಅವ್ವ ಏನೋ ವಸ್ತ ಇಟ್ಕೊಳ್ಳುತ್ತಾಳಂತೆ!" ಬಳಿಕ ಏನನ್ನೋ ನೆನಸಿಕೊಂಡು ಮತ್ತೆ ನುಡಿದಳು: "ಮುಂಚೆ ಇಟ್ಕೊಳ್ಳುತ್ತಿದ್ದಳು, ಈಗ ಇಟ್ಕೊಳ್ಳುವುದಿಲ್ಲ; ಎಲ್ಲಾ ವಸ್ತಾ ಸೊಗ್ಗದಲ್ಲಿ ಬಿಟ್ಟು ಬಂದಿದ್ದಾಳೆ. ಅವ್ವ ಹೇಳಿದ್ದಾಳೆ—ಅವಳು ಇನ್ನು ವಸ್ತ ಇಟ್ಕೊಳ್ಳುವುದಿಲ್ಲವಂತೆ."

ಲಜ್ಜೆಯಿಂದ ಗೋವರ್ಧನನ ಮುಖ ಕಂದಿ ಕಾಡಿಗೆಯಾಯಿತು. ವಾಸ್ತವವಾಗಿ ಹೈಮವತಿ ಅಲಂಕಾರಗಳನ್ನು ಧರಿಸುವವಳಲ್ಲ. ಈಗ ಧರಿಸಬೇಕಾಗಿ ಬಂದಿದೆ, ತನ್ನ ಹೆಂಡತಿಯೆಂದು ತೋರಿಸಿಕೊಳ್ಳುವುದಕ್ಕಾಗಿ! ಮೆಲ್ಲ ಮೆಲ್ಲಗೆ ಮಗಳಿಗೆ ಅವನೆಂದ: "ಇನ್ನು ಮೇಲೆ ನಿಮ್ಮವ್ವ ವಸ್ತ ಇಟ್ಕೊಳ್ಳುತ್ತಾಳೆ. ಹೋಗು, ಈ ವಸ್ತ ಈ ಬಟ್ಟೆ ನಿಮ್ಮವ್ವನಿಗೆ ಇಡಿಸಿ ತೊಡಿಸಿ ಬಾ."

ಆ ಮಗುವಿಗೆ ವಿಪರೀತ ಕೌತುಕ. ಎಲ್ಲ ಬಟ್ಟೆ ಒಡವೆಗಳನ್ನು ತೆಗೆದುಕೊಂಡು ಹೈಮವತಿಯನ್ನು ಹುಡುಕಿಕೊಂಡು ಹೋದಳು. ಹೈಮವತಿ ಕೋಣೆಯೊಂದರಲ್ಲಿ ಕಿಡಿಕಿಯ ಹತ್ತಿರ ನಿಂತು ಹೊರಗಡೆ ನೋಡುತ್ತಿದ್ದಳು. ಅನ್ನ-ಪೂರ್ಣೆ ಹಿಂದಿನಿಂದ ಹರ್ಷಧ್ವನಿಗೈದಳು: "ಈ ಬಟ್ಟೆ, ಈ ವಸ್ತ ಎಲ್ಲಾ ನಿನಗಂತೆ ಅವ್ವ! ಅಪ್ಪ ಹೇಳಿದ, ನೀನು ಇವನ್ನು ತೊಟ್ಕೊಳ್ಳಬೇಕಂತೆ!"

ಅವ್ವನು ಹೊರಳಿ ಕೂಡ ನೋಡಲಿಲ್ಲ. ಅವಳ ಕಣ್ಣುಗಳು ನೀರನ್ನು ಕರೆದಿದ್ದವು. ಈ ವೇಷವನ್ನು ಧರಿಸಿ ಗೋವರ್ಧನನೆದುರಿಗೆ ಹೇಗೆ ಹೋಗುವುದು, ಎಂದವಳು ಯೋಚಿಸುತ್ತಿದ್ದಳು. ಅನ್ನಪೂರ್ಣೆಗೆ ಉತ್ಸಾಹಭಂಗ-

ವಾಯಿತು. ಅಂಗೈಯಲ್ಲಿ ಒಟ್ಟೆ-ಒಡವೆಗಳನ್ನು ಹಿಡಿದುಕೊಂಡು ಹೈಮವತಿಯ ಪಕ್ಕದಲ್ಲಿ ಹೋಗಿ ನಿಂತಳು. ಮೊಗವನ್ನು ಮೇಲೆತ್ತಿ ನೋಡಿದೊಡನೆ ಅವ್ವನ ಕಣ್ಣುಗಳಲ್ಲಿ ನೀರನ್ನು ಕಂಡಳು. ಕೈಯೊಳಗಿನ ವಸ್ತ್ರವಸ್ತುಗಳನ್ನು ಜೋಕೆಯಿಂದ ಅವಳ ಕಾಲಬಳಿ ಇಟ್ಟು ಅನ್ನಪೂರ್ಣೆ ಏನೂ ಮಾತನಾಡದೆ ಹೊರಕ್ಕೋಡಿದಳು.

"ಅಪ್ಪಾ ಅಪ್ಪಾ, ಅವ್ವ ಅಳುತ್ತಾಳೆ, ಅರಿವೆ ವಸ್ತ್ರ ಏಕೆ ತಂದೆ? ಅವು ಆಕೆಗೆ ಸೇರಲಿಲ್ಲ."

ಗೋವರ್ಧನನೂ ಮಗಳ ಕಡೆ ನೋಡದೆ ನಿಟ್ಟುಸಿರಿಟ್ಟ. ತಂದೊಟ್ಟಿದ ಸಾಮಾನುಗಳನ್ನು ಓರಣಿಸಿ ಇಡುವುದರಲ್ಲಿಯೇ ಮಗ್ನನಾದ.

ಅಪ್ಪ ಅವ್ವ ಇಬ್ಬರೂ ವಿರಸರಾಗಿರುವುದನ್ನು ಕಂಡು ಅನ್ನಪೂರ್ಣೆಗೆ ಅಳು ಬರುವಂತಾಯಿತು. ಹಠಾತ್ತಾಗಿ ಗೋವರ್ಧನನು ಅವಳ ಕಡೆಗೆ ಹೊರಳಿ ಮಾತನಾಡಿದ: "ಬಾ, ನೀನು ಒಂದು ಕೆಲಸ ಮಾಡಬೇಕಮ್ಮ—ಇವೆಲ್ಲವನ್ನು ಹೊಂದಿಸಿಡು; ನೀನೇ ನಮ್ಮ ಮನೆಯ ಯಜಮಾನಿ"

ಅನ್ನಪೂರ್ಣೆ ಆನಂದದಿಂದ, ಓರಣಗೊಳಿಸಿದ ಸಾಮಾನುಗಳನ್ನು ಅಸ್ತವ್ಯಸ್ತವಾಗಿ ಇಡುವುದರಲ್ಲಿ ತೊಡಗಿದಳು.

ಬಹಳ ಹೊತ್ತಿನ ಮೇಲೆ ಗೋವರ್ಧನನು ಹೈಮವತಿಯನ್ನು ಅರಸಿಕೊಂಡು ಹೋದ. ಕಿಡಿಕಿಯ ಸಲಾಕೆಗಳ ಮೇಲೆ ತಲೆಯಿಟ್ಟುಕೊಂಡು ಅವಳು ಕುಳಿತಿದ್ದಳು. ಅವನು ಸದ್ದು ಮಾಡದೆ ಸುಮ್ಮನೆ ಹಿಂದಿರುಗಿಬಿಟ್ಟ. ಅವಳ ಬಳಿ ಹೋಗುವ ಸಾಹಸ ಅವನಿಗಾಗಲಿಲ್ಲ.

ಹೈಮವತಿಯಾಗ ಕುಳಿತುಕೊಂಡು ತನ್ನ ತಂದೆಯ ಬಗೆಗೆ ಯೋಚಿಸುತ್ತಿದ್ದಳು. ಶಿಶುವಿನಂತೆ ಅಸಹಾಯನಾದ ಆ ಮುದುಕನನ್ನು ಈಗ ನೋಡುವವರು ಯಾರು? ಜತನದಿಂದ ಜೋಪಾನ ಮಾಡುವವರು ಯಾರು? ತಾನು ಹೀಗೆ ಹೊರಟುಬಂದುದರಿಂದ ಅವರ ಮನಸಿಗೆ ಎಂತಹ ನೋವಾಗಿದೆಯೊ! ಗೋವರ್ಧನರೇನೋ ತನ್ನ ಮಾನವನ್ನು ಕಾಯುವುದಕ್ಕಾಗಿ, ತನ್ನ ಸಂತಾನಕ್ಕೆ ತಂದೆಯ ಹೆಸರನ್ನು ಕೊಡುವುದಕ್ಕಾಗಿ ಈ ಅಸಾಮಾನ್ಯ ಕೃತ್ಯವನ್ನು ಮಾಡಿದರು. ಅದು ತಂದೆಗೆ ಅಪಮಾನವಾಗಿ ಖಂಡಿತ ಪೀಡೆಯನ್ನುಂಟು

ಮಾಡುವುದು. ಅವರು ಗೋವರ್ಧನರನ್ನು ಕ್ಷಮಿಸುವುದು ಎಂದಾದರೂ ಸಾಧ್ಯವೇ? ಮಗಳ ಈ ಅಸ್ವಾಭಾವಿಕ ಕಠೋರತೆಯನ್ನು ಅವರು ಎಂದಿಗಾದರೂ ಮರೆಯಬಹುದೇ? ಅತ್ಯಂತ ಪರಕೀಯರಾದ ಗೋವರ್ಧನರೊಂದಿಗೆ ಚಿರಕಾಲವೂ ಇರುವುದು ಯಾವ ಸಂಬಂಧದ ಬಲದಿಂದ? ಹಡೆದ ಕರುಳಿನ ಆಸರವನ್ನು ತೊರೆದು ಎಲ್ಲಿಯವನೋ ಒಬ್ಬ ಮನುಷ್ಯನ ಮಗಳ ದಾದಿಯಾಗಿ, ಅವನ ಅಡಿಗೆಯವಳಾಗಿ, ಅವನ ಮನೆಗೆಲಸಗಳ ತೊತ್ತಾಗಿ ತಾನಿರಬೇಕಾಗಿದೆ! ಈ ಸ್ಥಿತಿ ಗೌರವದ್ದೇ? ಈ ಸಂಬಂಧ ಸಂಮಾನದ್ದೇ?

ನೆನೆನೆನೆದಂತೆ ಹೈಮವತಿಯ ಅಂತರಂಗವು ವ್ಯಥೆಯಿಂದ ಬೇಯಲು ಆರಂಭಿಸುತ್ತಿತ್ತು; ಅವಳ ಕಣ್ಣುಗಳು ಕ್ಷಣಕ್ಷಣಕ್ಕೆ ದುಃಖದಿಂದ ಹನಿಗರೆಯುತ್ತಿದ್ದವು; ತಿರಸ್ಕಾರದಿಂದ ಉರಿಗರೆಯುತ್ತಿದ್ದವು; ಲಜ್ಜೆಯಿಂದ ನೆಲಹಿಡಿಯುತ್ತಿದ್ದವು.

ಗೋವರ್ಧನನು ಮತ್ತೊಮ್ಮೆ ವರಾಂಡದಲ್ಲಿ ಸುಳಿದಾಡಿ ಹೈಮವತಿಯನ್ನು ನೋಡಿ ಹೋದ. ಈ ಸಲವೂ ಅವಳ ಬಳಿಸಾರಲು ಅವನಿಗೆ ಎದೆ ಸಾಲಲಿಲ್ಲ; ಏನೊಂದೂ ಮಾತನಾಡಲಾಗಲಿಲ್ಲ ಹೀಗೆಯೆ ಮತ್ತೆರಡು ಬಾರಿ ಕೋಣೆಯ ಮುಂದೆ ಅಲೆದಾಡಿದ. ಕೊನೆಗೊಮ್ಮೆ ಬಾಗಿಲಲ್ಲಿ ನಿಂತು ಮೆಲ್ಲಗೆ ಕೆಮ್ಮಿದ. ಅವಳು ತಿರುಗಿ ನೋಡಲಿಲ್ಲ. ಅವನು ಮನಮುದುಡಿದವನಾಗಿ ಕಾಲ್ದೆಗೆದ.

"ಅಕ್ಕಾಜೀ!" ಗೋವರ್ಧನನು ಮತ್ತೊಮ್ಮೆ ಬಂದು, ಬಾಗಿಲಲ್ಲಿ ಕೆಲ ಹೊತ್ತು ಸುಮ್ಮನೆ ನಿಂತಿದ್ದು ಭಯಸಂಕೋಚಗಳಿಂದ ಕೂಗಿದ.

ಹೈಮವತಿ ಈಗಲೂ ಮಾತನಾಡಲಿಲ್ಲ; ತಿರುಗಿ ನೋಡಲೂ ಇಲ್ಲ.

"ನಾನು ಸ್ವಲ್ಪ ಹೊರಗೆ ಹೋಗಿ ಬರುತ್ತೇನೆ." ಮತ್ತೆ ಕೆಲಹೊತ್ತು ಮೌನವಾಗಿದ್ದು ಗೋವರ್ಧನನು ಹೇಳಿದ.

"ಆಗಲಿ" ಮೋರೆಯನ್ನು ಈ ಕಡೆ ತಿರುಗಿಸದೆ ಮೃದುಸ್ವರದಲ್ಲಿ ಅವಳು ಉತ್ತರವಿತ್ತಳು.

ಇನ್ನೂ ಕೆಲಹೊತ್ತು ಕಾಯ್ದುಕೊಂಡಿದ್ದು ಗೋವರ್ಧನನು ಹೇಳಿದ. "ಬಾಗಿಲಿಕ್ಕಿಕೊಳ್ಳಬೇಕು."

ನಿಂತಿದ್ದ ಹಾಗೆಯೆ ಹೈಮವತಿ ಮಾರುನುಡಿದಳು: “ ನೀವು ಹೋಗಿರಿ, ನಾನು ಇಕ್ಕಿಕೊಳ್ಳುತ್ತೇನೆ.”

ಗೋವರ್ಧನನ ಮುಖವು ಮಲಿನವಾಯಿತು. ನಿಟ್ಟುಸಿರೊಂದನ್ನು ಬಿಟ್ಟು ಹೊರಟುಹೋದ. ಹೊರಡುತ್ತ “ ಮಗೂ, ನಾನೊಂದಿಷ್ಟು ಹೊರಗೆ ಹೋಗಿಬರುತ್ತೇನೆ; ನೀನು ನಿಮ್ಮವ್ವನ ಹತ್ತಿರವೇ ಇರು,” ಎಂದು ಅನ್ನ-ಪೂರ್ಣೆಗೆ ಹೇಳಿದ.

ಆಗ ಅನ್ನಪೂರ್ಣೆ ಗೃಹಕೃತ್ಯದ ಸಾಮಾನುಗಳನ್ನು ಆಕಡೆಯಿಂದೀಕಡೆ ಈಕಡೆಯಿಂದಾಕಡೆ ಇಡುವುದರಲ್ಲಿ ತನ್ಮಯಳಾಗಿದ್ದಳು. ದೊಡ್ಡದೊಂದು ಆಟವನ್ನು ಹೂಡಿ ಆಡುತ್ತಿರುವಂತೆ ಆನಂದ ಅವಳಿಗೆ. “ಹೂಂ” ಎಂದು ಪುನಃ ತನ್ನ ಆಟದ ಸಂಸಾರದಲ್ಲಿ ಮನವನ್ನಿರಿಸಿದಳು.

ಪೆರವರ ಮನೆಯಲ್ಲಿ ಹೊಸ ಬಾಳುವೆ ಹೂಡಬೇಕಾಯಿತೆಂಬ ಲಜ್ಜೆಯಿಂದ ಹೈಮವತಿಗೆ ಗೋವರ್ಧನನ ಕಡೆಗೆ ನೋಡುವುದೂ ಸಾಧ್ಯವಾಗಿರಲಿಲ್ಲ. ತಲೆವಾಗಿಲಿನ ಸದ್ದಿನಿಂದ ಅವನು ಹೊರಗೆ ಹೋದುದರ ಅರಿವಾಗಲು, ತಿರುಗಿ ಬರುವುದರೊಳಗೆ ಸಾಮಾನುಗಳನ್ನು ಹೊಂದಿಸಿಡಬೇಕೆಂದು ಯೋಚಿಸಿ ಆ ಕೆಲಸದಲ್ಲಿ ತೊಡಗಿದಳು. ಉಗ್ರಾಣ ಕೋಣೆಯಲ್ಲಿ ಸಾಮಾನುಗಳನ್ನು ಓರಣವಾಗಿ ಮಡಗಿದಳು, ಬಟ್ಟೆಬರೆ ವಸ್ತುಒಡವೆಗಳನ್ನು ಪೆಟ್ಟಿಗೆಯಲ್ಲಿ ಇರಿಸಿದಳು. ಆ ಮೇಲೆ ಹಾಸಿಗೆಯನ್ನು ಹಾಸಲು ಹೋದಳು. ಹಿಂದಕ್ಕೆ ಎಷ್ಟೋ ಸಲ ಗೋವರ್ಧನನ ಹಾಸಿಗೆಯನ್ನು ಅವಳು ಕೊಡವಿ ಹಾಸಿ ಕೊಟ್ಟಿದ್ದಳು; ಆಗವಳಿಗೆ ನಾಚಿಕೆಯಾಗಲಿ ಗ್ಲಾನಿಯಾಗಲಿ ಎಂದೂ ಉಂಟಾಗಿರಲಿಲ್ಲ. ಇಂದು ಮಾತ್ರ ಒಂದು ಕೋಣೆಯೊಳಗೆ ಅವನಿಗೆ ಹಾಸಿ, ಇನ್ನೊಂದರಲ್ಲಿ ತನಗೆ ಹಾಸುವಾಗ ಅವಳ ಮನಸಿನಲ್ಲಿ ಹೇಗೆ ಹೇಗೋ ಆಯಿತು, ತಲೆಯೆ ಕತ್ತರಿಸಿ ಬೀಳುವಂತಾಯಿತು.

ಸಂಜೆಯ ಮುಂದೆ ಗೋವರ್ಧನನು ಮನೆಗೆ ಮರಳಿದಾಗ ಹೈಮವತಿ ಹೊಸ ಕಬ್ಬಿಣೊಲೆಯ ಮೇಲೆ ಹೊಸ ಪಾತ್ರೆಯಲ್ಲಿ ತರಕಾರಿ ಬೇಯಿಸುತ್ತಿ-ದ್ದಳು. ಅನ್ನಪೂರ್ಣೆಗಾಗಿ ಒಂದು ಪುಟ್ಟ ಪಾತ್ರೆ ತಂದಿತ್ತು. ಅವಳು ಅವ್ವನ ಪಕ್ಕದಲ್ಲಿ ಕುಳಿತು ತುಂಬುತೊಗಟೆಗಳನ್ನು ಕೂಡಿಸಿ ಪಲ್ಯಮಾಡುತ್ತಲಿದ್ದಳು.

" ಅವ್ವಾ, ಈವೊತ್ತು ನೀನು ನಮ್ಮನೆಗೆ ಊಟಕ್ಕೆ ಬಾ." ಎಂದು ಅನ್ನ-ಪೂರ್ಣೆ ಹೇಳಿದಳು.

ಹಿಂದಿನಂತೆ ಇಂದು ಈ ಅವ್ರುತನದಿಂದ ಹೈಮವತಿಯಲ್ಲಿ ಉಲ್ಲಾಸವಾಗಲಿ ಉತ್ಸಾಹವಾಗಲಿ ಕಂಡು ಬರಲಿಲ್ಲ. ಅತ್ಯಂತ ಗಂಭೀರವಾಗಿ ನಿಟ್ಟುಸಿ-ರನ್ನು ಕರೆದು ಮಾತನಾಡಿದಳು: " ಇನ್ನು ದಿನಾಲು ನನ್ನ ಊಟ ನಿಮ್ಮ ಮನೆಯಲ್ಲಿಯೇ ಮಗೂ."

ಅವ್ವನು ದಿನಾಲೂ ತನ್ನ ಮನೆಯಲ್ಲಿಯೇ ಉಣ್ಣುವಳೆಂಬುದನ್ನು ಕೇಳಿಯೂ ಅವಳ ಮುಖಭಾವವನ್ನು ಕಂಡ ಅನ್ನಪೂರ್ಣೆಗೆ ಎಷ್ಟೂ ಸಂತೋಷವಾಗಲಿಲ್ಲ. ಅವಳು ತಟ್ಟನೆ ಕೇಳಿದಳು: " ನೀನು ಮನೆ ಬಿಟ್ಟು ಏಕೆ ಬಂದೆ ಅವ್ವ? ಅಲ್ಲಿ ನಾವು ಚೆಲೋ ಇದ್ದೆವು. ಸುಡುಗಾಡು ಕಲಕತ್ತೆ!"

ಇದರಿಂದ ಹೈಮವತಿಯ ಮುಖವು ವಿಕೃತ ವಿವರ್ಣವಾಯಿತು. ನೋಡಿ ಅನ್ನಪೂರ್ಣೆಗೆ ಭಯವಾಯಿತು. ಅವಳು ಮುಂದೆ ಮಾತನಾಡದೆ ತನ್ನ ಕೆಲಸದಲ್ಲಿ ತೊಡಗಿದಳು. ಗೋವರ್ಧನನು ಬಂದಾಗ ಇಬ್ಬರೂ ನೀರವ. ತಬ್ಬಲಿಯಾಗಿದ್ದ ಅನ್ನಪೂರ್ಣೆ ತಾರಾಪುರಕ್ಕೆ ಹೋದ ಬಳಿಕ ತಾಯಿಯನ್ನು ಪಡೆದಿದ್ದಳು; ಉತ್ಫುಲ್ಲೆಯಾಗಿದ್ದಳು. ಎದ್ದಾಗಿನಿಂದ ನಿದ್ದೆ ಹತ್ತುವವರೆಗೂ ಅವಳ ಆನಂದಕಲರವಕ್ಕೆ ವಿರಾಮವೇ ಇರುತ್ತಿರಲಿಲ್ಲ. ಹೈಮವತಿಯೂ ಅವಳೊಡನೆ ತೊದಲು ಮಾತನಾಡುತ್ತ ಆಟದಲ್ಲಿ ಸೇರಿರುತ್ತಿದ್ದಳು. ಇಲ್ಲಿಗೆ ಬಂದ ಕ್ಷಣದಿಂದ ಹೈಮವತಿಯ ಭಾವಾಂತರವು ಮಗುವನ್ನೂ ಆವರಿಸಿದೆ ಗೋವ-ರ್ಧನನು ನಿಟ್ಟುಸಿರನ್ನು ಎದೆಯೊಳಗೇ ಅದುಮಿಟ್ಟ. ಅವನು ಕೋಣೆಯ ಬಾಗಿಲಲ್ಲಿ ಬಂದು ನಿಲ್ಲುತ್ತಲೇ, ಹೈಮವತಿ ಒಮ್ಮೆಯೆಂದರೊಮ್ಮೆಯೆ ಅವನ ಕಡೆ ನೋಡಿ, ಪುನಃ ಮೋರೆ ಕೆಳಗೆ ಮಾಡಿಕೊಂಡು ಪಲ್ಯ ಮಾಡುವುದರಲ್ಲಿ ನಿಮಗ್ನಳಾದಳು.

" ಇಲ್ಲಿ ಕೇಳು ಅಕ್ಕಾಜೀ!" ಕೊಂಚ ಹೊತ್ತಿನ ಬಳಿಕ ಗೋವರ್ಧನನು ನುಡಿದ.

ಅವಳು ಹೊರಳಿ ನೋಡಿದಳು. ಅವನು ತಿರುಗಿ ಹೊರಟಿದ್ದ. ಪಲ್ಯದ ಪಾತ್ರೆಯನ್ನು ಕೆಳಗಿರಿಸಿ ಅವಳು ಅವನ ಹಿಂದೆ ಹಿಂದೆ ನಡೆದಳು. ತುಸ

ಮುಂದುವರಿದ ಬಳಿಕ ಹೈಮವತಿ ತನ್ನ ಹಿಂದೆ ಬರುತ್ತಿರುವುದನ್ನರಿತು ಗೋವರ್ಧನನು ತಿರುಗಿ ನಿಂತ. ಪೆಟ್ಟುಬಿದ್ದು ಅವಳೂ ತಟ್ಟನೆ ನಿಂತಳು: "ನಾನು ಪುರೋಹಿತನನ್ನು ಹುಡುಕಲಿಕ್ಕೆ ಹೋಗಿದ್ದೆ ಅಕ್ಕಾಜೀ.... ಈ ಮಾದರಿಯ ಮದುವೆಯನ್ನು ಮಾಡಿಸುವ ಪುರೋಹಿತರಿಲ್ಲ.... ...ಬಹಳ ಕಷ್ಟಪಟ್ಟು ಹುಡುಕಿದ ಮೇಲೆ ಒಬ್ಬ ಒಳ್ಳೇ ಪುರೋಹಿತ ಸಿಕ್ಕ....ಆದರೆ ಮದುವೆಗೆ ಸಾಕ್ಷಿಯಾಗಿ ಕೆಲವರಾದರೂ ಆಪ್ತೇಷ್ಟರಿರಬೇಕು, ಇಲ್ಲದಿದ್ದರೆ ಸಂಬಂಧ ಗಟ್ಟಿಯಾಗಲಾರದು."

ಯಾರು ಯಾರು ಪರಿಚಿತರು ಅಪರಿಚಿತರು ತನ್ನ ಲಜ್ಜಾಸ್ಪದವಾದ ವ್ಯವಹಾರವನ್ನು ನೋಡಲು ಬರುವರೋ, ಏನೇನು ಆಡಿಕೊಳ್ಳುವರೋ ಎಂಬ ಗಾಬರಿ ನಾಚಿಕೆಗಳಿಂದ ಹೈಮವತಿಯು ನೋರೆ ಹಂಚುಬಡೆದಂತಾಯಿತು. ಗೋವರ್ಧನನು ತನ್ನ ಮಾತನ್ನು ಮುಂದುವರಿಸಿದ; "....ಅವರೆಲ್ಲರನ್ನು ತರಬೇಕೆಲ್ಲಿಂದ? ಅಲ್ಲದೆ ಈ ರೀತಿಯ ವಿವಾಹಕ್ಕೆ ಬರುವರಾದರೂ ಯಾರು?"

ಈ ಮಾತನ್ನು ಕೇಳಿದಾಗ ಹೈಮವತಿ, ಅಷ್ಟಾದರೆ ಬದುಕಿಕೊಂಡೆ ಎಂದುಕೊಂಡಳು.

"ನಾನು ಹೇಳಿದುದನ್ನೆಲ್ಲ ಕೇಳಿಕೊಂಡು ಪುರೋಹಿತ ಹೇಳಿದ— ನೀವೊಂದು ಕೆಲಸ ಮಾಡಿರಿ, ನೋಂದಣಿ ವಿವಾಹ ಮಾಡಿಕೊಳ್ಳಿರಿ ಮೊದಲು, ಆಮೇಲೆ ನಾನು ಬಂದು ಶಾಸ್ತ್ರೋಕ್ತವಾಗಿ ಮದುವೆ ಸಾಂಗಮಾಡಿಕೊಡುತ್ತೇನೆ." ಎಂದ ಗೋವರ್ಧನ.

ಕಚೇರಿಗೆ ಹೋಗಬೇಕಾಗುವುದೆಂದೊಡನೆ ಅವಳ ಮುಖ ಒಣಗಿತು. ಬಿಗಿದ ಕೊರಲಿನಿಂದ, ನಡುಗುವ ದನಿಯಲ್ಲಿ ಅವಳೆಂದಳು: "ಮದುವೆಯನ್ನೇ ಮಾಡಿಕೊಳ್ಳದಿದ್ದರೆ ?"

ಸಹಾನುಭೂತಿ ಮಮತೆಗಳಿಂದ ವ್ಯಥಿತನಾಗಿ ಲಜ್ಜಿತನಾಗಿ ಗೋವರ್ಧನನು ನುಡಿದ: "ಮದುವೆ ಮಾಡಿಕೊಳ್ಳದೆ ನಡೆಯುತ್ತಿದ್ದರೆ ನಾವಿಲ್ಲಿಗೆ ಬಂದುದೇಕೆ ?...." ಮುಂದೇನೂ ಮಾತನಾಡಲಾಗದೆ ಅವನು ಅರ್ಧಕ್ಕೇ ನಿಂದಿರಿಸಿದ. ಅವಳ ಮುಖ ಲಜ್ಜೆಯಿಂದ ಕೆಂಪಾಯಿತು. ಅವಳು ಲಗುಬಗೆಯಿಂದ ಹಿಂದಿರುಗಿ ಹೊರಟುಹೋದಳು. ಗೋವರ್ಧನನು ಆ ಚೆಲುವೆಯು

ಅನಿರ್ವಚನೀಯವಾದ ಲಜ್ಜಾ ಸೌಂದರ್ಯವನ್ನು ಮುಗ್ಧ ನೇತ್ರಗಳಿಂದ ನೋಡುತ್ತ ನಿಂತುಬಿಟ್ಟ.

## ೧೫

ಮಾರ್ಗಶೀರ್ಷಮಾಸದ ೨೭ನೆಯ ದಿನ ಮದುವೆಯ ಮುಹೂರ್ತವೆಂದು ಗೊತ್ತಾಗಿದೆ. ಮದುವೆಯ ಕಾರ್ಯವನ್ನು ಬೇಗನೆ ಮುಗಿಸಿಬಿಡಬೇಕೆಂಬ ಗೋವರ್ಧನನ ಆಗ್ರಹವು ಹೈಮವತಿಗೆ ಬಹಳ ಹೆಚ್ಚೆಂದು ತೋರಿತು. ಅದರಿಂದ ಯಾವುದೋ ಅನಿರ್ದಿಷ್ಟವಾದ ಸಂದೇಹವು ಅವಳ ಮನವನ್ನು ಆಕ್ರಮಿಸಿತು. ತನಗಾಗಿ ಗೋವರ್ಧನನು ಮಾಡುತ್ತಿರುವ ತ್ಯಾಗದಿಂದ ತನ್ನ ಮನಸು ಅವನ ಕಡೆಗೆ ಒಲೆಯುತ್ತಿರುವುದನ್ನು ನೆನೆದಾಗ, ಅವಳು ಅವನನ್ನೂ ತನ್ನನ್ನೂ ಸಭಯಚಕ್ಷುಗಳಿಂದ ನೋಡಲಾರಂಭಿಸುವಳು.

ಗೋವರ್ಧನನ ಮನಸಿನಲ್ಲಿಯೂ ವಿಹ್ವಲತೆಯ ನಡುನಡುವೆ ಈಷತ್ ಆನಂದವು ಹಣಿಯಿಕ್ಕುತ್ತಿತ್ತು. ತಾನು ವಿಧವೆಯೊಬ್ಬಳನ್ನು ಮದುವೆಯಾಗುತ್ತಿದ್ದಾನೆ, ಮದುವೆಯಾದರೂ ಅವಳೆಂದೆಂದೂ ತನ್ನ ಮಡದಿಯಾಗುವುದಿಲ್ಲ, ಬೇರೊಬ್ಬನ ಸಂತತಿಯ ತಾಯಿಯಾಗುತ್ತಾಳೆ, ಇದರಿಂದ ತಾನು ಮನೆಮಾರು ಬಂಧುಬಳಗಗಳಿಗೆ ಎರವಾಗುತ್ತಾನೆ, ತನ್ನ ಉಪಜೀವನದ ಹಾದಿಗೆ ಮುಳ್ಳು ಬಡಿಯುವುದು, ಮಗಳ ಮದುವೆಯಾಗುವುದು ದುಸ್ತರವಾಗುವುದು, ತಾನು ಅಕಸ್ಮಾತ್ ಸತ್ತುಹೋದರೆ ಹೆಂಡತಿ ಮಕ್ಕಳಿಗೆ ಯಾರೂ ದಿಕ್ಕಿಲ್ಲದಂತಾಗುವುದು—ಎಂದು ಯೋಚಿಸಿ ಯೋಚಿಸಿ ಗೋವರ್ಧನನ ಮನಸು ಉದ್ವಿಗ್ನವಾಗುತ್ತಿತ್ತು. ಅದರೊಳಗೇ, ಉಪಕಾರ ಮಾಡಿದವಳಿಗೆ ಪ್ರತ್ಯುಪಕಾರಮಾಡುತ್ತಿದ್ದೇನೆಂಬ ತೃಪ್ತಿಯೋ, ಹೈಮವತಿಯನ್ನು ಚಿರಕಾಲವೂ ತನ್ನವಳನ್ನಾಗಿ ಪಡೆಯಬೇಕೆಂಬ ಸುಪ್ತಗುಪ್ತ ಪ್ರಲೋಭವು ಸಾರ್ಥಕವಾಗುವುದೆಂದೋ ಆನಂದಾನುಭವವೂ ಅವನಿಗಾಗುತ್ತಿತ್ತು. ಅವಳ ಬಗೆಗೆ ಅವನಲ್ಲಿ ಬಹುದಿನಗಳಿಂದ ಸಂಚಿತವಾಗಿದ್ದ ಸ್ನೇಹವು ಅನ್ನಪೂರ್ಣೆಯ ಮಧ್ಯಸ್ಥಿಕೆಯಿಂದ ಪ್ರಣಯರೂಪವನ್ನು ಹೊಂದುತ್ತಿರಬಹುದು; ಆದರಿಂದಲೇ ಅವಳನ್ನು ಉಳಿಸಿಕೊಳ್ಳಲು ಅವನು ಪ್ರಾಣಸಂಕಟವನ್ನು ಆಲಂಗಿಸಿರಲು ಸಾಕು; ಮುಂದವಳ

ಪರಿಚರ್ಯೆಯಿಂದ ಆ ಅನುರಾಗವು ಪ್ರಬಲವಾಗಿರಬೇಕು; ಅವಳು ಆತ್ಮ-ಹತ್ಯೆಗೆ ಉಜ್ಜುಗಿಸಿದಾಗ ಆ ಪ್ರೀತಿ ನಿಜರೂಪವನ್ನು ಪ್ರಕಟಿಸಲಾರಂಭಿಸಿತು. ಆಗ ಅವನು ಅವಳ ಮಾನವನ್ನು ಕಾಯುವುದಕ್ಕಾಗಿ ಈ ದುರೂಹ ದುಃಸಹ ಕರ್ತವ್ಯವನ್ನು ಅಂಗೀಕರಿಸಿದ. ಈಗವನ ಮನಸು ಹೈಮವತಿಯ ಪ್ರಸನ್ನತೆಯ ಪುರಸ್ಕಾರವನ್ನು ಹೊಂದಿದರೆ ಸಾಕು, ಮಿಕ್ಕೆಲ್ಲ ಕಷ್ಟ-ದುಃಖಗಳು ಮರೆತುಹೋಗುವವು.

ಗೋವರ್ಧನನು ಹೈಮವತಿಯೂರಿನ ಹಾಗೂ ತಮ್ಮೂರಿನ ಬಳಗಕ್ಕೆಲ್ಲ ಮದುವೆಯ ಔತಣದೋಲೆಗಳನ್ನು ಬರೆದ— ತಾವು ಪುತ್ರಮಿತ್ರಕಲತ್ರ ಸಹಿತವಾಗಿ ಬಂದು ಶುಭಕಾರ್ಯವನ್ನು ಸಾಂಗಗೊಳಿಸಬೇಕೆಂದು.

ಆಮಂತ್ರಣವನ್ನೋದಿ ವಂಶಲೋಚನರು ಬೆಂಕಿಬೆಂಕಿಯಾದರು. ಈ ಕೃತಘ್ನನಿಗೆ ಆಮಂತ್ರಣ ಕಳಿಸುವ ಸಾಹಸ ಬೇರೆ, ಸೊಕ್ಕು ಬೇರೆ! ಅವರು ಮಗಳ ಕಲಂಕವನ್ನು ಮುಚ್ಚಿಡುವುದಕ್ಕಾಗಿ ಊರ ಜನರ ಮುಂದೆ ಹುಟ್ಟಿಸಿ ಹೇಳಿದ ಮಾತು ದಿಟವಾದುದಕ್ಕಾಗಿ ಕೊಂಚ ಆನಂದವೂ ಆಯಿತವರಿಗೆ. ಗೋವರ್ಧನನು ಹೈಮವತಿಯನ್ನು ಧರ್ಮಪತ್ನಿಯೆಂದು ಪರಿಗ್ರಹಿಸಿದುದರಿಂದ ತಮ್ಮ ಲಜ್ಜೆ-ಅಪಮಾನಗಳು ಎಷ್ಟೋ ಮಟ್ಟಿಗೆ ಕಡಿಮೆಯಾದಂತೆ ಅವರಿಗೆ ಎನಿಸಿತು. ವಿಧವಾವಿವಾಹವು ಗರ್ಹಣೀಯವೇನೋ ಅಹುದು; ಆದರದು ಸ್ವೈರಾಚರಣೆಗಿಂತ ಎಷ್ಟೋ ಪಟ್ಟು ಉತ್ತಮವಾದುದೆಂದು ನಿರುಪಾಯವಾಗಿಯಾದರೂ ಅವರು ಒಪ್ಪಿಕೊಳ್ಳಬೇಕಾಯಿತು. ಹೀಗೆ ಮೆಲ್ಲಮೆಲ್ಲನೆ ಅವರ ಮನಸು ಗೋವರ್ಧನನ ಈ ಸದ್ಬುದ್ಧಿಯ ದೆಸೆಯಿಂದ ಕೃತಜ್ಞತೆಯಿಂದ ವ್ಯಾಪ್ತವಾಯಿತು, ಸಕಲ ವಿದ್ವೇಷವನ್ನೂ ತಿರಸ್ಕಾರವನ್ನೂ ಮರೆತು ಅವರು ಅವನನ್ನು ಆಶೀರ್ವದಿಸಲುದ್ಯುಕ್ತರಾದರು. ಪತ್ರವನ್ನು ಕೈಯಲ್ಲಿ ಹಿಡಿದುಕೊಂಡೇ ಕಾಲೀಮಂದಿರಕ್ಕೆ ಹೋಗಿ ಅಶ್ರುಪೂರ್ಣನಯನಗಳಿಂದ ಕೈಜೋಡಿಸಿ ಬಿನ್ನವಿಸಿದರು: 'ತಾಯಿ, ಮನುಷ್ಯರಿಗೆ ಸದ್ಬುದ್ಧಿಯನ್ನು ಕೊಡುವಾಕೆ ನೀನು; ನಾವು ಪ್ರವೃತ್ತಿಗಳ ದಾಸರಾಗಿ ಪಾಪಗಳನ್ನಾಚರಿಸುವೆವು; ನೀನು ಆ ಪಾಪಗಳನ್ನು ಕೂಡ ಪುಣ್ಯಪಥದಲ್ಲಿ ನಡೆಸುವ ಪ್ರವೃತ್ತಿಯನ್ನು ಪಾಪಿಗಳಿಗೆ ದಯೆಪಾಲಿಸುತ್ತೀ. ನಿನ್ನ ಲೀಲೆ ಅಗಾಧ! ನಿನ್ನ ಸಂತಾನ-ವಾತ್ಸಲ್ಯ ಧನ್ಯ!'

ಭಾವಿಸಿಕೊಳ್ಳುತ್ತಿದ್ದ ಹಾಗೆಯೇ ಆನಂದವು ವಂಶಲೋಚನರ ಕಣ್ಣೀರನ್ನು ಒರಸಿತು. ಭಕ್ತಿಭರದಿಂದ ದೇವಿಗೆ ಸಾಷ್ಟಾಂಗವಾಗಿ ಎರಗಿ, ಅವರು ಊರೊಳಗೆ ಅಡ್ಡಾಡಲು ಹೊರಟರು. ಬೀದಿಯಲ್ಲಿ ಕಂಡಕಂಡವರಿಗೆಲ್ಲ ಆನಂದ ಗದ್ಗದ ಸ್ವರದಲ್ಲಿ ಹೇಳುತ್ತ ನಡೆದರು: "ಇದೇ ಇಪ್ಪತ್ತೇಳನೆಯ ರವಿವಾರ ನಮ್ಮ ಹಿಮೂನ ಮದುವೆ. ಕಾಂಸಾರಿಪಾಡಾದಲ್ಲಿ ಮನೆ ಹಿಡಿದಿದ್ದಾರೆ. ನೀವೆಲ್ಲರೂ ಬರಬೇಕು."

ಅವರ ಭಾವಭಂಗಿಯನ್ನು ಕಂಡು ಎಲ್ಲರೂ ಮುದುಕನ ತಲೆ ಕೆಟ್ಟಿದೆ ಎಂದು ಭಾವಿಸಿದರು. ವಂಶಲೋಚನರು ನೆಟ್ಟಗೆ ವಿಶೂಕಾಕಾನ ಅಡ್ಡೆಗೆ ಹೋದರು. ಹಾರು, ಆಕೈತವ, ಶಶಿ ಡಾಕ್ಟರ್ ಮೊದಲಾದವರ ಕೂಟ ನೆರೆದಿತ್ತು. ಅವರೆಲ್ಲರಿಗೂ ಗೋವರ್ಧನನಿಂದ ಆವುತಣ ಬಂದೇ ಇತ್ತು. ಅಂದಿನ ಕೂಟದಲ್ಲಿ ಅದೇ ಚರ್ಚೆಯ ವಿಷಯ. ವಂಶಲೋಚನರನ್ನು ಕಾಣುತ್ತಲೆ ಎಲ್ಲರೂ ಸುಮ್ಮನಾದರು.

"ನಿಮಗೆ ಆವುತಣ ಹೇಳಲು ಬಂದೆ" ಎಂದರು ವಂಶಲೋಚನರು.

"ವಂಶ, ನಿನಗೆ ಮತಿಭ್ರಂಶವಾಗಿದೆಯೆಂದು, ಎಲ್ಲರಿಗೂ ಆಗಿದೆಯೆಂದು ತಿಳಿದುಕೊಂಡೆಯೇನು ? ಯಾವನೋ ಏನೋ ಪೂಜಾರಿ ಬ್ರಾಹ್ಮಣ—ಅವನಿಗೆ ವಿಧವೆಯಾದ ಮಗಳನ್ನು ಕೊಡುತ್ತಿದ್ದೀ! ಈ ಮದುವೆಗೆ ನಾವು ಬರುವುದೆ ? ರಾಮ ರಾಮಾ!" ಎಂದು ನುಡಿದ ವಿಶು.

ಮಗಳ ಕಲಂಕವನ್ನು ಮಾಜುವುದಕ್ಕಾಗಿ ತಾವು ಹೇಳಿದ ಸುಳ್ಳು ಸತ್ಯವಾಯಿತೆಂಬ ಆನಂದದಲ್ಲಿ ವಂಶಲೋಚನರು ಹೋಗಿದ್ದರು. ಈಗ ವಿಶುಕಾಕಾ, ತಮ್ಮ ಮಗಳು ವಿಧವೆಯೆಂಬುದನ್ನೂ ಆವಳನ್ನು ಒಬ್ಬ ಪೂಜಾರಿ ಬ್ರಾಹ್ಮಣನಿಗೆ—ಅವರ ಮನೆಯನ್ನ ಸ್ವೀಕರಿಸಿದರೆ ತಮ್ಮ ಜಾತಿಯೇ ಕೆಟ್ಟು ಹೋಗುವುದು—ಕೊಟ್ಟು ಮದುವೆ ನಡೆದಿದೆಯೆಂಬುದನ್ನೂ ಜ್ಞಾಪಕಕ್ಕೆ ತಂದು ಕೊಟ್ಟ. ಅವರ ಮುಖ ಕಂದಿತು. ಅವರ ಮನಸು ಗೋವರ್ಧನ ಹೈಮವತಿಯರಿಬ್ಬರನ್ನೂ ತಿರಸ್ಕರಿಸತೊಡಗಿತು. ಮೋರೆ ಕೆಳಗೆ ಹಾಕಿಕೊಂಡು ಅಲ್ಲಿಂದ ಕಾಲುಕಿತ್ತರು.

ವಂಶಲೋಚನರು ಅಪ್ರತಿಭರಾದುದನ್ನು ಕಂಡು ಆನಂದಗೊಂಡು

ಹಾರು ನುಡಿದ: "ವಂಶಣ್ಣ, ಮಗಳ ಮದುವೆಯ ಊಟ ಹೊಡೆಯಲಿಕ್ಕೆ ನೀನು ಹೋಗುವವ ಹಾಗಾದರೆ ?"

ಮಾತು ಮರ್ಮಕ್ಕೆ ತಾಗಿ, ಅಲ್ಲಿ ನಿಲ್ಲಲಾರದೆ ವಂಶಲೋಚನರು ಗಾಯಗೊಂಡ ಹರಿಣದಂತೆ ಮನೆಗೋಡಿದರು.

## ೧೬

ಹೈಮವತಿ ಗೋವರ್ಧನರ ವಿವಾಹ ಸಮಾರಂಭಕ್ಕೆ ಅವರಿಬ್ಬರ ಊರುಗಳಿಂದಲೂ ಇಬ್ಬರು ಮೂವರು ಬಂದಿದ್ದರು. ಈ ಮದುವೆಯನ್ನು ಅನುಮೋದಿಸುವ ವಿಚಾರದಿಂದಲ್ಲ; ಅವರಿಬ್ಬರ ಬಗೆಗೆ ಪ್ರೀತಿಯಿರುವುದೆಂದಾಗಲಿ, ಸಹಾನುಭೂತಿಯುಂಟೆಂದಾಗಲಿ ತೋರಿಸುವ ಉದ್ದೇಶದಿಂದಲೂ ಅಲ್ಲ. ವಿಧವಾ ವಿವಾಹವು ಹೇಗಾಗುವುದೆಂಬುದನ್ನು ನೋಡುವ ಕುತೂಹಲದಿಂದ; ತಮ್ಮ ತಿರಸ್ಕಾರವನ್ನು ಮನವಾರೆ ಕಾರಲೆಂದು.

ಈವರೆಗೂ ಹೈಮವತಿ ವಿಧವಾ ವೇಷವನ್ನು ಬಿಟ್ಟಿರಲಿಲ್ಲ. ಗೋವರ್ಧನನು ತನಗೆ ಮುತ್ತೈದೆಯ ಸೀರೆಯನ್ನು ತಂದ ಉದ್ದೇಶವನ್ನರಿತಿದ್ದರೂ ಅವನು ಹೇಳಿದುದನ್ನು—ಬಾಯಿಂದ ಅಲ್ಲಗಳೆಯಲಿಕ್ಕಾಗದೆ ಹೋದರೂ—ವರ್ತನೆಯಿಂದ ವಿರೋಧಿಸಿದಳು. ಅವಳು ಸೀರೆಯ ಅಂಚುಗಳನ್ನು ಸೀಳಿ ತೆಗೆದು ಉಟ್ಟಿದ್ದಳು. ಇದರಿಂದ ಗೋವರ್ಧನನ ಮನಸಿಗೆ ಕ್ಲೇಶವಾದರೂ ಅವಳಿಗೆ ಏನೊಂದೂ ಮಾತನಾಡಿರಲಿಲ್ಲ. ಅವಳ ಈ ಬಗೆಯ ನಡೆವಳಿಕೆ ವಿಶೇಷ ಮಹತ್ವದ್ದೆಂದು ಅವನು ಬಗೆಯಲಿಲ್ಲ. ಆದರೆ ತಾನು ಅವಳಿಗಾಗಿ ಇಷ್ಟೊಂದು ತ್ಯಾಗಮಾಡಿಯೂ, ತನ್ನ ಆಶ್ರಯದಲ್ಲಿಯೇ ಅವಳು ಇರುತ್ತಿದ್ದೂ ಅವಳ ಮನಸಿನಲ್ಲಿ ತನ್ನ ಬಗೆಗೆ ಒಂದಿಷ್ಟಾದರೂ ಕೃತಜ್ಞತೆ, ಕೊಂಚವಾದರೂ ಅನುರಾಗ ಹುಟ್ಟಬಾರದೆ ಎಂದು ಗೋವರ್ಧನನಿಗೆ ಎನಿಸುತ್ತಿತ್ತು. ತನ್ನನ್ನು ಕಲಂಕಿತಳನ್ನಾಗಿ, ಧರ್ಮಭ್ರಷ್ಟಳನ್ನಾಗಿ ಮಾಡಿದ ದುಶ್ಚರಿತ್ರನಾದ ತರಲನ ಬಗ್ಗೆ ಅವಳಿಗೆ ಎಷ್ಟೊಂದು ಒಲವು! ತನ್ನ ಸಂಬಂಧದ ಕುರುಹಾದ ಸೀರೆಯ ಅಂಚನ್ನು ಹರಿದೊಗೆದು, ಅವನ ಸಂಬಂಧದ ದ್ಯೋತಕವಾದ ವಿಧವಾ ವೇಷವನ್ನೇ ಹೈಮವತಿ ಮೆಚ್ಚುತ್ತಿರುವಳು! ಅವಳು ಸೀಳಿದುದು ಅಂಚನ್ನಲ್ಲ,

ಗೋವರ್ಧನನ ಮರ್ಮವನ್ನು! ಆದರೂ ಅವನು ತನ್ನ ಕ್ಲೇಶ ಅಸಂತೋಷ ಗಳನ್ನು ಸ್ವಲ್ಪವೂ ಅವಳೆದುರಿನಲ್ಲಿ ಪ್ರಕಟಿಸಲಿಲ್ಲ.

ಇಂದು ಮದುವೆ. ಈವೊತ್ತಾದರೂ ಹೈಮವತಿ ಮುತ್ತೈದೆಯ ವೇಷ ವನ್ನು ಧರಿಸಿ, ತನ್ನೊಡನಿದ್ದ ಸತೀತ್ವ ಸಂಬಂಧವನ್ನು ಜನರೆದುರಿನಲ್ಲಿ ಒಪ್ಪಿ-ಕೊಳ್ಳಲಿ ಎಂದವನ ಇಚ್ಛೆ. ಬಾಯಿ ಬಿಚ್ಚಿ ಏನನ್ನೂ ಹೇಳುವುದಾಗಲಿಲ್ಲ. ಇಂದವನು ಮತ್ತೆ ಒಂದು ಕಮಲಪತ್ರೀ ಸೀರೆ, ಕುಪ್ಪಸ, ಒಂದು ಜೊತೆ ಬಳೆ ಕೊಂಡು ತಂದು, ಅನ್ನಪೂರ್ಣೆಯ ಮೂಲಕ ಹೈಮವತಿಗೆ ಕಳುಹಿದ. ಮದು ವೆಯ ಸಮಯದಲ್ಲಿಯೂ ಅವಳು ವಿಧವಾ ವೇಷದಿಂದ ಬರುವುದೆಂದರೆ ತನಗೆ ನಾಚಿಕೆಗೇಡಲ್ಲವೇ?

ಗೋವರ್ಧನನ ನೀರವವಾದ ಮನೋಭಾವನೆ ಹೈಮವತಿಗೆ ತಿಳಿಯ ದಿರಲಿಲ್ಲ. ಆದರೆ ಮುತ್ತೈದೆಯ ವೇಷವನ್ನು ಧರಿಸುವುದಕ್ಕೆ ಅವಳಿಗೆ ಹೇಳ ಬಾರದಷ್ಟು ನಾಚಿಕೆ. ಮತ್ತೊಬ್ಬರು ಯಾರಾದರೂ ಉಡಿಸಿ ತೊಡಿಸಿ ಮಾಡಿ ದ್ದರೆ ಆ ನಾಚಿಕೆಯನ್ನು ಅವಳು ಸೈರಿಸಿಕೊಳ್ಳಬಹುದಿತ್ತು. ಮನೆಯೊಳಗೆ ಅವಳ ಹೊರತು ಮತ್ತೊಂದು ಸ್ತ್ರೀವ್ಯಕ್ತಿಯಿಲ್ಲ ಅವಳ ಕೋಣೆಯ ಮುಂದು ಗಡೆಯಲ್ಲಿ ಗೋವರ್ಧನನೊಮ್ಮೆ ಅಲೆದು ಹೋದ—ವಿವಾಹ ವೇಷವನ್ನು ಅವಳು ಧರಿಸುವಳೋ ಹೇಗೆಂಬುದನ್ನು ನೋಡಲಿಕ್ಕೆ; ಧರಿಸದಿದ್ದುದನ್ನು ಕಂಡು ಮುಖ ತಗ್ಗಿಸಿಕೊಂಡು ತಿರುಗಿದ.

ಹೊರಗಡೆ ಚಿಲಕದ ಸದ್ದಾಯಿತು. ಗೋವರ್ಧನನು ಹೋಗಿ ಬಾಗಿ ಲನ್ನು ತೆರೆದು ನೋಡಿದ. ಅಂಚೆಯಾಳು ಹೈಮವತಿಯ ಹೆಸರಿನಲ್ಲಿ ಒಂದು ವಿಮೆಯಿಳಿಸಿದ ಕಟ್ಟು ಬಂದಿತ್ತು. ಅದನ್ನು ಅಂಚೆಕಟ್ಟೆಗೆ ಹೋಗಿ ಪಡೆಯ ಬೇಕು. ಗೋವರ್ಧನನು ಆನಂದದಿಂದ ಹೈಮವತಿಯ ಹತ್ತಿರ ಧಾವಿಸಿ ಹೋಗಿ, "ನಿನಗೆ ನಿಮ್ಮಪ್ಪ ಏನೋ ವಿಮೆ ಮಾಡಿ ಕಳಿಸಿದ್ದಾರೆ. ಈ ಹಾಳೆಯ ಮೇಲೆ ಅಂಕಿತ ಹಾಕಿ ಕೊಟ್ಟರೆ ನಾನು ಹೋಗಿ ತರುತ್ತೇನೆ." ಎಂದು ಹೇಳಿದ.

ಅವಳಿಗೆ ಅತ್ಯಂತ ಅಚ್ಚರಿಯಾಯಿತು. ತಂದೆ ತನಗೆ ಏನನ್ನೋ ಕಳಿಸಿ ರುವರು! ಅಸಂಭವ ಘಟನೆ! ತನ್ನ ನಿಷ್ಠುರವಾದ ನಿರ್ದಯವಾದ ಪರಿತ್ಯಾಗದ ತರುವಾಯುವೂ ತನ್ನನ್ನು ತ್ಯಜಿಸದಿದ್ದ ಪಿತೃಸ್ನೇಹವನ್ನು ನೆನೆದು ತನ್ನನ್ನು ತಾನು ಧಿಕ್ಕರಿಸಿಕೊಂಡಳು.

ಅಂಚಿಕಟ್ಟೆಯಿಂದ ಪೆಟ್ಟಿಗೆಯೊಂದನ್ನು ತಂದು ಹೈಮವತಿಯ ಬಳಿ ಇರಿಸಿ ಗೋವರ್ಧನನು ಹೊರಟುಹೋದ. ಅದನ್ನು ತೊಡೆಯ ಪಕ್ಕದಲ್ಲಿ ಇಟ್ಟುಕೊಂಡು ಅವಳು ಎಷ್ಟೋ ಹೊತ್ತು ಸ್ತಬ್ಧವಾಗಿ ಕುಳಿತಿದ್ದಳು. ಬಹಳ ಹೊತ್ತಿನ ತರುವಾಯು ಕಟ್ಟನ್ನು ಬಿಚ್ಚಿದಳು. ಒಳಗೊಂದು ಕೈಪೆಟ್ಟಿಗೆ. ಅದು ಅವಳ ತಾಯಿಯದು. ಆಕೆ ತೀರಿಕೊಂಡ ಬಳಿಕ ಸ್ತ್ರೀಸಂಪತ್ತಿಯೆಂದು ವಂಶಲೋಚನರು ಅದನ್ನು ಜೋಪಾನವಾಗಿರಿಸಿದ್ದರು. ಈಗ ಆ ಪೆಟ್ಟಿಗೆಯನ್ನು ಪಿತೃಕುಲವನ್ನು ಧಿಕ್ಕರಿಸಿದ, ಅಡ್ಡದಾರಿಯನ್ನು ಹಿಡಿದ, ಧರ್ಮಚ್ಯುತಳಾದ ಮಗಳಿಗೆ ಉಡುಗೊರೆಯಾಗಿ ಕಳಿಸಿದ್ದಾರೆ! ತಂದೆಯ ವಾತ್ಸಲ್ಯದ ಶಲ್ಯದ ಆಘಾತದಿಂದ ಅವಳ ಹೃದಯುವು ಅತ್ಯಂತ ವ್ಯಥಿತವಾಯಿತು. ಪೆಟ್ಟಿಗೆಯ ಹಿಡಿಕೆಗೆ ಕಟ್ಟಿದ ಬಂಗಾರದ ಸರಪಣಿಯಲ್ಲಿ ಜೋತಾಡುತ್ತಿತ್ತು ಕೀಲಿಕೈ. ಹೈಮವತಿ ಪೆಟ್ಟಿಗೆಯ ಬಾಯಿ ತೆರೆದಳು. ತನ್ನ ತಾಯಿಯ ಹಾಗೂ ತನ್ನ ಎಲ್ಲ ಒಡವೆಗಳಿವೆ. ಅದರೊಂದಿಗೆ ಒಂದು ಲಕ್ಕೋಟೆ 'ಜಗದಂಬೆಯ ಹರಕೆ' ಎಂದು ಬರೆದಿದೆ ಮೇಲೆ ಲಗುಬಗೆಯಿಂದ ಆ ಹರಕೆಯ ಭಂಡಾರ ವನ್ನೊಡೆದಳು. ಅದರೊಳಗೆ ಕಾಲೀಮಾತೆಯ ನಿರ್ಮಾಲ್ಯ ಮತ್ತು ಕುಂಕುಮ! ರಂಡೆಮುಂಡೆಯಾದ ಮಗಳನ್ನು ಗರತಿ ಮುತ್ತೈದೆಯ ಕುರುಹಾದ ಕುಂಕು-ಮದಿಂದ ಅಭಿನಂದಿಸಿದ್ದಾರೆ! ಸುಖ-ವೇದನೆಗಳೆರಡೂ ಒಟ್ಟಾಗಿಯೇ ಹೈಮ-ವತಿಯ ಕಣ್ಣುಗಳಲ್ಲಿ ನೀರಾಗಿ ಹರಿದವು. ಪೆಟ್ಟಿಗೆಯ ತಳದಲ್ಲಿ ಉತ್ತಮ ದರ್ಜೆಯ ಬೆಲೆಬಾಳುವ ಬನಾರಸೀ ಸೀರೆಗಳು, ಸೂಟುಗಳ ಸಿಪ್ಪುದೊಂದು. ಇವೆಲ್ಲವೂ ಅವಳ ಮದುವೆಯ ಉಡುಗೊರೆ. ಈ ಮದುವೆಯ ಸುದ್ದಿಯನ್ನು ಕೇಳಿ ತಂದೆಗೆ ನಿಜವಾಗಿಯೂ ಮರ್ಯಾದೆ ಉಳಿಯಿತೆಂಬ ಸಮಾಧಾನ ವಾಗಿದೆಯೆಂದು ಹೈಮವತಿ ತಿಳಿದಳು. ಅಂತೆಯೇ, ದೇವರ ಹೆಸರಿನಲ್ಲಿ ತಂದೆಯ ಆಶೀರ್ವಾದವು ತನ್ನನ್ನು ಲಾಂಛನಗ್ಲಾನಿಗಳಿಂದ ರಕ್ಷಿಸುವುದಕ್ಕೆ ಬಂದಿದೆ; ಅಂತೆಯೇ ಕೆಟ್ಟುದರಲ್ಲಿಯೇ ಒಳ್ಳೆಯದೆಂದು ಭಾವಿಸಿ, ಎಲ್ಲ ತಪ್ಪು ಗಳನ್ನೂ ಕ್ಷಮಿಸುವ ದೇವತೆಯ ಹೆಸರಿನಲ್ಲಿ ಈ ಮದುವೆಗೆ ಅವರು ಒಪ್ಪಿಗೆ ಯನ್ನು ಸೂಚಿಸಿದ್ದಾರೆ; – ಎಂದು ಅವಳು ಭಾವಿಸಿದಳು

ತಂದೆಯ ಸಹಾನುಭೂತಿಯ ಸಮ್ಮತಿಯಿಂದಾಗಿ ಹೈಮವತಿಯ ಮನಸು ಗೋವರ್ಧನನ ದೊಡ್ಡತನದಲ್ಲಿ ಅನುರಕ್ತವಾಯಿತು. ಆಗವಳು ತನ್ನ ಕೈಲಿ

ತಾನೇ ವಿವಾಹವೇಷವನ್ನು ಧರಿಸಲು ಕುಳಿತುಕೊಂಡಳು. ಆ ಕ್ಷಣದಲ್ಲಿ ತರಲನ ವಿಷಯವು ಆವಳಿಗೆ ನೆನಪಾಗಲಿಲ್ಲ ಗೋವರ್ಧನನ ತ್ಯಾಗ ಅನುರಾಗಗಳೇ ಬೆಳೆದು ನಿಂತು ಉಳಿದವೆಲ್ಲವನ್ನೂ ಮರೆಮಾಡಿದ್ದವು.

ವಂಶಲೋಚನರಿಂದ ಏನೇನು ಬಂದಿವೆಯೆಂಬುದನ್ನು ಅರಿತುಕೊಳ್ಳುವ ಕುತೂಹಲದಿಂದ ಗೋವರ್ಧನನು ಹೈಮವತಿಯ ಕೋಣೆಯ ಬಾಗಿಲಲ್ಲಿ ಹೋಗಿ ನಿಂತ. ಅರುಣಕಾಂತಿಯಿಂದ ವಿಭೂಷಿತಳಾದ ನವೋದಿತ ಉಷೆಯಂತೆ ಕುಳಿತಿದ್ದಾಳೆ ಹೈಮವತಿ, ವಸ್ತ್ರಾಲಂಕಾರ ಮಂಡಿತೆಯಾಗಿ ವಧೂವೇಷದಲ್ಲಿ. ಆವನ ಮುಖ ಅರಳಿ ಇಷ್ಟಗಲವಾಯಿತು, ಕಳೆದುಂಬಿತು. ಇಷ್ಟು ಕಾಲದ ಮೇಲೆ ಈ ದಿನ ಅವಳು ತನ್ನ ಸಂಬಂಧವನ್ನು ತಾನಾಗಿ ಒಪ್ಪಿದ್ದಾಳೆ. ಗೋವರ್ಧನನು ನಗುಮೊಗದಿಂದ ನಟ್ಟ ನೋಟದಿಂದ ತನ್ನನ್ನೇ ನೋಡುವುದನ್ನರಿತು ಹೈಮವತಿಯ ಮುಖ ನಾಚಿಕೆಯಿಂದ ಬಾಗಿತು.

ಮಲಗಿದ್ದ ಅನ್ನಪೂರ್ಣೆ ನಿದ್ದೆ ತಿಳಿದು ಮೈಮುರಿದೆದ್ದು ಕುಳಿತು, ಹೈಮವತಿಯನ್ನು ನೋಡಿ, “ಅವ್ವಾ, ನೀನು ವಧುವಾಗಿದ್ದೀಯಾ ? ನಾನೂ ಆಗುತ್ತೇನೆ ಅವ್ವಾ,” ಎಂದು ನುಡಿಯುತ್ತ ಅವಳ ಕೊರಳಿಗೆ ತೋಳುಗಳನ್ನು ತೊಡಿಸಿ ಬೆನ್ನಮೇಲೆ ಬಿದ್ದಳು.

ಹೈಮವತಿ ಅವಳನ್ನು ನಗುಮೊಗದಿಂದ ಮೌನವಾಗಿ ಸೆಳೆದು ತನ್ನ ಮುಂದೆ ಕುಳ್ಳಿರಿಸಿಕೊಂಡಳು. ಅವಳಿಗೆ ಹಾಳತಾಗುವ ವಸ್ತ್ರಭೂಷಣಗಳಿಂದ ಅಲಂಕರಿಸತೊಡಗಿದಳು.

## ೧೭

ರಾತ್ರಿ ಮದುವೆ ಎರಡೂ ರೀತಿಗಳಿಂದ ಸಾಂಗವಾಯಿತು—ಶಾಸನೋಕ್ತವಾಗಿ ಮತ್ತು ಶಾಸ್ತ್ರೋಕ್ತವಾಗಿ. ನೋಂದಣಿ ವಿವಾಹ ಸಮಯದಲ್ಲಿ ತಾನು ಹಿಂದುವಲ್ಲವೆಂದು ಹೇಳುವಾಗ ಗೋವರ್ಧನನ ಮನಸಿಗೆ ಹೇಗೆ ಹೇಗೋ ಆಯಿತು. ನಿಟ್ಟುಸಿರು ಹೊರಬೀಳಲು ಹವಣಿಸಿತು. ಅದನ್ನು ದಮನಿಸಿ ಸ್ಪಷ್ಟವಾದ ಸ್ವರದಲ್ಲಿ ‘ನಾನು ಹಿಂದುವಲ್ಲ’ ಎಂದು ಅವನು ಹೇಳಿದ. ಆದಾದ

ಬಳಿಕ ಹಿಂದೂ ಪದ್ಧತಿಯಮೇರೆಗೆ ಶಾಸ್ತ್ರೋಕ್ತ ವಿವಾಹ ವಿಧಾನ ತಾನು ಹಿಂದುವೇ ಅಲ್ಲವೆಂದಾದ ಬಳಿಕ ಈ ವಿಧಾನದ ಅಗತ್ಯವೇನು ಎಂದೊಮ್ಮೆ ಅವನಿಗೆನಿಸಿತು. ಆದರೆ ಬರೀ ನೋಂದಣೀ ಮದುವೆಯಲ್ಲಿ ಅವನಿಗೆ ತೃಪ್ತಿಯಿರಲಿಲ್ಲ; ಶಾಸ್ತ್ರದಲ್ಲಿ ಅವಿಚಲ ಶ್ರದ್ಧೆ. ಸಂಪ್ರದಾನ ಸಮಯದಲ್ಲಿ ಹೈಮವತಿ ಗೋವರ್ಧನನ ಕೈಯಲ್ಲಿ ತನ್ನ ಅದಿರುವ ಕರಪಲ್ಲವವನ್ನಿಟ್ಟಾಗ ಅವನ ನರನರದಲ್ಲಿಯೂ ಆನಂದ ಸಂಗೀತ ಮಿಡಿಯಿತು. ಈ ಮುಂಚೆ ಅವಳನ್ನು ಕೊಳದಿಂದೆತ್ತಿ ತೆಗೆದಾಗಲೂ– ಅವಳ ದೇಹಲತೆ ತನ್ನ ಇಡೀ ಮೈಯನ್ನು ವ್ಯಾಪಿಸಿದ್ದಾಗಲೂ—ಈ ತೆರದ ಅನುಭವ ಅವನಿಗಾಗಿರಲಿಲ್ಲ. ಇಂದಿನ ಅಲ್ಪ ಸ್ಪರ್ಶದಲ್ಲಿಯೇ ಅವರ ಪ್ರಣಯವು ಹೃದಯದಿಂದ ಹೃದಯಕ್ಕೆ ಪ್ರವಹಿಸಿತೋ ಏನೋ, ಪರಸ್ಪರ ಸಂಬಂಧವು ಘನಿಷ್ಠನಾಗಿ ಆತ್ಮೀಯರಾದರೋ ಏನೋ! ಶುಭದೃಷ್ಟಿಯ ಸಮಯದಲ್ಲಿ, ತೆರೆಯ ಮರೆಯೊಳಗೆ ಹೈಮವತಿಯ ಕೃತಜ್ಞತೆಯಿಂದ ತೊಯ್ದ ನಯನಗಳೆರಡು ಲಜ್ಜಾಭಾರದಿಂದ ತಗ್ಗಿದ ಎವೆಗಳನ್ನು ಬಿಡಿಸಿಕೊಂಡು ಹಕ್ಕಿಯಂತೆ ಹಾರುತ್ತಿರುವಾಗ, ಮಧ್ಯದಲ್ಲಿಯೆ ಗೋವರ್ಧನನ ಹರ್ಷಭರಿತವಾದ ಅನಿಮೇಷ ದೃಷ್ಟಿಯಿಂದ ತಡೆಯುಂಟಾಗಿ, ತಿರುಗಿ ಹೋಗಿವಳ ಹೃದಯನೀಡದಲ್ಲಿ ಆಸರೆ ಹೊಂದಿದವು ಆ ಬಳಿಕ ಮಾಲೆಗಳನ್ನು ಬದಲು ಮಾಡಿ ಗಂಟು ಹಾಕಿದಾಗ, ಮಾಲೆಯಂತೆಯೇ ಸರಸಕೋಮಲವಾದ ಹೃದಯಗಳನ್ನು ನಾವು ಎಂದೋ ಬದಲು ಮಾಡಿದ್ದೆವು, ಹೃದಯ ಹೃದಯಗಳಿಗೆ ಎಂದೋ ಯಾವಾಗಲೋ ಗಂಟುಬಿದ್ದು ಹೋಗಿತ್ತು, ಇಂದು ನಡೆದುದು ಅದರ ಪುನರಭಿನಯ ಮಾತ್ರ ಎಂದು ಇಬ್ಬರಿಗೂ ಎನಿಸಿತು.

ಮದುವೆಯಾದ ಬಳಿಕ ಮದುಮಕ್ಕಳೇ ಗಂಡಿನ ಹಾಗೂ ಹೆಣ್ಣಿನ ಕಡೆಯ ಐದು ಜನಕ್ಕೆ ಭೋಜನ ಮಾಡಿಸಿದರು. ಅಪ್ಪ-ಅವ್ವನ ಮದುವೆಯಾಗುವುದನ್ನು ನೋಡಿ ಇಲ್ಲದ ಪ್ರಶ್ನೆಗಳನ್ನು ಕೇಳೀತೆಂದು, ಅನ್ನಪೂರ್ಣೆಯನ್ನು ಹೊತ್ತುಂಟಲೆ ಉಣಿಸಿ ಮಲಗಿಸಿದ್ದಳು ಹೈಮವತಿ. ತನ್ನ ಊಟವಾದ ಮೇಲೆ ಅವಳು ಕೋಣೆಗೆ ಹೋದಳು. ಮಲಗಿದ ಅನ್ನಪೂರ್ಣೆಯ ಬದಿಯಲ್ಲಿ ಗೋವರ್ಧನನ ಮೌನಮೂರ್ತಿ. ಸಂಜೆಯಲ್ಲಿ ಬೇಗನೆ ಉಂಡು ಮಲಗುವುದು ಅವನ ಅಭ್ಯಾಸ; ಮಲಗಿದಾಕ್ಷಣ ನಿದ್ದೆ ಅವನ ಕೈಯೊಳಗಿನದೇ. ಇಂದು ಮಾತ್ರ ಎಷ್ಟು ರಾತ್ರಿಯಾದರೂ ಅವನಿಗೆ ನಿದ್ದೆ ಬರಲೊಲ್ಲ-

ದಾಗಿತ್ತು. ಅವನಿನ್ನೂ ಹಾಗೆ ಕುಳಿತುದನ್ನು ಕಂಡು ಹೈಮವತಿ ಅಚ್ಚರಿಗೊಂಡಳು. ಜಾರಿದ ಸೆರಗನ್ನು ಮುಂದಲೆಯ ಮೇಲೆ ಎಳೆದುಕೊಳ್ಳುವಾಗ ಅವಳ ಮುಖ ಲಜ್ಜೆಯಿಂದ ಉದ್ಭಾಸಿತವಾಯಿತು. ಸಂಕೋಚವನ್ನು ಬದಿಗಿರಿಸಿ ನುಡಿದಳು: "ನೀವಿನ್ನೂ ಮಲಗಿಲ್ಲವೇ? ಹೋಗಿರಿ, ಮಲಗಿಕೊಳ್ಳಿರಿ."

ಗೋರ್ಧನನು ನಿಟ್ಟುಸಿರುಗರೆದು ಎದ್ದು ನಿಂತು ಹೇಳಿದ: "ಹೋಗುತ್ತೇನೆ."

ಎತ್ತಲಾರದ ಹೆಜ್ಜೆಗಳನ್ನೆತ್ತಿಡುತ್ತ ಅವನು ಹೊರಟುಹೋಗುತ್ತಲೆ ಹೈಮವತಿಯ ಮೋರೆ ಮ್ಲಾನವಾಯಿ ತು, ಕರುಣಾರ್ದ್ರವಾಯಿತು. ಅವಳು ನಿಟ್ಟುಸಿರಿಟ್ಟು ಅವನು ಹೋದ ನಿಟ್ಟನ್ನೇ ನೋಡುತ್ತ ನಿಂತಳು.

ಮರುದಿನ ನಸುಕಿನಲ್ಲಿಯೇ ಗೋವರ್ಧನನೆದ್ದು ಬಂದು, ಹೈಮವತಿಯ ಕೋಣೆಯ ಬಾಗಿಲನ್ನು ನೂಕಿ ಕೂಗಿದ:

"ಅನೂನ ತಾಯಿೞ!"

ಹೈಮವತಿಯ ನಿದ್ದೆ ಬಿಟ್ಟಿತ್ತು. ಕೂಗು ಕೇಳಿಸಿತು. ಅದು ಗೋವರ್ಧನನ ಕರೆಯೆಂದು ಅವಳಿಗೆನಿಸಲಿಲ್ಲ. ಅವನಿಷ್ಟು ದಿನ ಅಕ್ಕಾಜಿ ಎಂದೇ ಕರೆಯುತ್ತಿದ್ದ. ಇಂದು ಅಕಸ್ಮಾತ್ ಈ ಸಂಬೋಧನೆ ಅವನದಾಗಿದ್ದೀತೇ? ವಿಚಾರದಲ್ಲಿ ಅವಳಿಂದ ಉತ್ತರವನ್ನೀಯಲಾಗಲಿಲ್ಲ

"ಓ ಅನೂನ ತಾಯಿೞ!"

ಈ ಕರೆಯ ಅಭಿಪ್ರಾಯವು ಹೊಳೆಯುತ್ತಲೆ ಲಜ್ಜೆ ಹೈಮವತಿಯನ್ನು ಮುಸುಕಿತು ಅದಕ್ಕೆ ಓ ಕೊಡುವುದೇ ಕಠಿನವಾಯಿತು. ಚಂಚಲಳಾಗಿ ಎದ್ದು ವೇಷಭೂಷಣಗಳನ್ನು ಸಾವರಿಸಿಕೊಳ್ಳಲು ತೊಡಗಿದಳು. ಮತ್ತೂ ಉತ್ತರ ಬಾರದಿರಲು ಪುನಃ ಬಾಗಿಲನ್ನು ತಟ್ಟಿ ಕೂಗಿದ ಗೋವರ್ಧನ:

"ಹೈಮವತೀ!"

ಅವರಿಬ್ಬರಲ್ಲಿ ಸ್ನೇಹದ ಸೂತ್ರಪಾತವಾಗುವ ಮೊದಲು ಗೋವರ್ಧನನು ಅವಳನ್ನು ಹೆಸರುಗೊಂಡು ಕರೆದಿದ್ದ; ಆ ಬಳಿಕ ಹೀಗೆಂದೂ ಕರೆದಿರಲಿಲ್ಲ. ಈಗ ಒಂದೇ ಒಂದು ದಿನದಲ್ಲಿ ಪರಿವರ್ತನೆ—ಮತ್ತೆ ಆ ಅತಿಪೂರ್ವದ ಕರೆ.

ಹೈಮವತಿ ಈಗಲೂ ಓಗೊಡದೆ ಎದ್ದು ಹೋಗಿ ಬಾಗಿಲನ್ನು ತೆರೆದು ಉಷಾ-ಪ್ರಕಾಶದಲ್ಲಿ ಪ್ರತ್ಯುಷೆಯಂತೆ ಅವನೆದುರಿನಲ್ಲಿ ನಿಂತಳು.

ಮುಚ್ಚಿದ ಬಾಗಿಲ ಆ ಕಡೆಯಲ್ಲಿದ್ದಾಗ ಸಂಕೋಚವನ್ನು ಅತಿಕ್ರಮಿಸಿ ಹಾಗೆ ಕೂಗಿದ್ದ ಗೋವರ್ಧನ. ನವವಧುವಿನ ಲಜ್ಜಾಸುಂದರ ಮೂರ್ತಿಯನ್ನು ಎದುರಿನಲ್ಲಿ ಕಂಡಾಗ ಅವನೂ ಲಜ್ಜೆಯಿಂದ ಅಪ್ರತಿಭನಾದ. ಮುಗ್ಧದೃಷ್ಟಿಯನ್ನು ಅವಳ ಸೌಂದರ್ಯಜಲದಲ್ಲಿ ಮೀಯಿಸಿ ನಗುತ್ತ ಅವನೆಂದ: "ಈ ದಿನ ಕಾಲರಾತ್ರಿ. ಈಪೊತ್ತು ಗಂಡಹೆಂಡಿರ ಭೆಟ್ಟಿಯಾದರೆ ಪ್ರೀತಿ ಕೆಡುವುದು. ಅದಕ್ಕೇ ನಾನಿಷ್ಟು ಬೇಗನೆ ಮನೆ ಬಿಟ್ಟು ಹೋಗುತ್ತಿದ್ದೇನೆ—ಈ ಮದುವೆಯಲ್ಲಿ ನಾನು ಉಡುಗೊರೆಯಾಗಿ ಪಡೆದದ್ದು ನಿನ್ನ ಪ್ರೀತಿ ಮಾತ್ರ, ಅದೂ ಕಳೆದುಹೋಯಿತೆಂದರೆ ನನ್ನ ಸರ್ವಸ್ವವೂ ಹೋದಂತೆ. ನಾಳೆ ಮುಂಜಾನೆಯೇ ತಿರುಗಿ ಬರುತ್ತೇನೆ, ಜೋಕೆಯಿಂದ ಇರು"

ನಾಚಿಕೆಯಿಂದ ನೋವಿನಿಂದ ಹೈಮವತಿಯ ಮುಖವು ಆರಕ್ತವಾಯಿತು. 'ನನಗಾಗಿ ನೀವೇನೇನು ಮಾಡುವಿರೋ ಏನೇನು ಮಾಡುತ್ತಿರುವಿರೋ ಅದಕ್ಕಾಗಿ ನಾನು ನನ್ನ ಸತೀಧರ್ಮದ ಹೊರತು ಉಳಿದುದೆಲ್ಲವನ್ನೂ ನಿಮಗೊಪ್ಪಿಸುವೆ, ನಿಮ್ಮೊಡನೆ ಅಪ್ರೀತಿಯುಂಟಾಗುವುದೆಂಬ ಮಿಥ್ಯಾಭಯವೇತಕ್ಕೆ?' ಎಂಬ ಮಾತುಗಳು ಅವಳ ಮನಸಿನಲ್ಲಿ ಮೂಡಿದವು. ಹಾಗೆಂದು ಹೇಳಿ ಗೋವರ್ಧನನ ಗಮನವನ್ನು ತಡೆಯುವುದು ಅವಳಿಂದಾಗದೆಹೋಯಿತು. ತಲೆತಗ್ಗಿಸಿಕೊಂಡು ನಿಂತುಬಿಟ್ಟಳು

ಗೋವರ್ಧನನು ಹಾರಯಿಸಿದ್ದ—ಹೈಮವತಿ ತನಗೆ ಹೋಗಲು ಬೇಡವೆನ್ನುವಳು,ತಾನು ಹೊರಟರೆ ಅಡ್ಡಗಟ್ಟಿ ತಡೆಯುವಳು, ಅವಳ ಸಜಲನಯನಗಳು ತನ್ನನ್ನು ಹಿಡಿದು ನಿಲ್ಲಿಸುವವು ಎಂದು. ತನ್ನ ಆಶೆ ದುರಾಶೆ, ತನ್ನ ಅನುಮಾನ ತಪ್ಪು, ಸಂಪೂರ್ಣ ಭ್ರಮೆ ಎಂದೀಗ ತಿಳಿದುಕೊಂಡು ನಿಡಿದಾಗಿ ಉಸಿರುಗರೆದು ಅವನು ಹೊರಟುಹೋದ. ತಲೆವಾಗಿಲನ್ನು ತೆರೆದ ಸದ್ದು ಬಂದು ಹೈಮವತಿಯ ಎದೆಗೆ ಬಡಿದಾಗ, ತನ್ನ ಹೃದಯದ ಬಾಗಿಲನ್ನೆ ತೆರೆದುಕೊಂಡು ಅವನು ಹೊರಟುಹೋದನೇನೋ ಎಂದು ಅವಳಿಗೆ ಭಾಸವಾಯಿತು. ಹೋಗಿ ಅನ್ನಪೂರ್ಣೆಯ ಹತ್ತಿರ ಮಲಗಿ, ಅವಳನ್ನೆರಡು ಕೈಗಳಿಂದಲೂ ಬಿಗಿಯಾಗಿ ತಬ್ಬಿಕೊಂಡಳು. ಅವಳ ನಿದ್ದೆ ಓಡಿತು.

"ಅವ್ವಾ ಊ! ನೋವಾಗುತ್ತದೆ!"

ಹೈಮವತಿ ಅನ್ನಪೂರ್ಣೆಯನ್ನು ಮತ್ತಷ್ಟು ಗಟ್ಟಿಯಾಗಿ ಅಪ್ಪಿಕೊಂಡಳು.

ಸಂಚಿತವಾಗಿದ್ದ ಕ್ಷುಧಿತ ಆವೇಗವನ್ನೆಲ್ಲಾ ನಿಃಶೇಷಗೊಳಿಸಿ ಹೃದಯವನ್ನು ಹಗುರುಮಾಡಿಕೊಳ್ಳುವುದಕ್ಕಾಗಿ, ಆ ಮಗುವಿನ ಕೆನ್ನೆಗಳನ್ನು, ತುಟಿಗಳನ್ನು, ಹಣೆಯನ್ನು, ಕೊರಳನ್ನು ಎಡೆವಿಡದೆ ಚುಂಬಿಸಲಾರಂಭಿಸಿದಳು. ಈ ಆದರದ ಪೀಡನೆಯ ಅತುಲ ಸುಖದಲ್ಲಿ ಖಿಲಖಿಲನೆ ನಗುತ್ತ "ಅವ್ವಾ ನೋವಾಗುತ್ತದೆಯೆ, ಏ ಅವ್ವಾ, ನನಗೆ ನೋವಾಗುತ್ತದೆಯೇ" ಎಂದು ಅನ್ನಪೂರ್ಣೆ ಕೂಗಿಕೊಳ್ಳುತ್ತಲಿದ್ದಳು.

ಅಂದು ಹೈಮವತಿಯ ಮನಸು ತುಂಬಾ ಶೂನ್ಯ; ಹಾರಿಹೋದ ಹಕ್ಕಿಯ ಪಂಜರ. ಗೋವರ್ಧನನ ಅಭಾವದಿಂದ ಅವಳ ಗುಪ್ತಮನೋಭಾವವು ಬಯಲಿಗೆ ಬಂದಿತು ಅಣುಪ್ರಾಯವಾದ ಆಲದ ಬೀಜವು ಎಂದೋ ಯಾವಾಗಲೋ ಯಾರಿಗೂ ತಿಳಿಯದಂತೆ ಮನೆಯ ಮಾಳಿಗೆಯ ಮೇಲೆ ಬಿದ್ದು, ಗಾಳಿ ಬಿಸಿಲುಗಳಿಂದ ಹೇಗೋ ಏನೋ ಆತ್ಮರಕ್ಷಣೆಮಾಡಿಕೊಂಡಿರುವುದು; ಒಂದಾನೊಂದು ದಿನ ಮಳೆಯಿಂದ ಸಸಿಯಾದಾಗಲೂ ಕಂಡವರ ಗಮನವನ್ನು ಸೆಳೆಯುವುದಿಲ್ಲ; ಅದು ಜನರ ಲಕ್ಷ್ಯಕ್ಕೆ ಬರುವಷ್ಟು ಬೆಳೆದಾಗ ಅದರ ಬೇರುಗಳು ಜಂತೆ-ಗೋಡೆ-ಕುಂಬಿಗಳಲ್ಲಿ ಚಾಚಿಕೊಂಡಿರುವವು. ಹೈಮವತಿ ಈಗ ನೋಡಿದಳು—ಗೋವರ್ಧನನ ಪ್ರೀತಿ-ಸ್ನೇಹ-ಅನುರಾಗ ಅವಳ ಮನದ ರತ್ನಪ್ರಾಸಾದದಲ್ಲಿ ಸಾವಿರಾರು ಬೇರುಗಳನ್ನು ಚಾಚಿ ನೆಲೆ ನಿಂತಿದೆ. ಅದರ ಭವಿಷ್ಯತ್ತನ್ನು ನೆನೆದು—ಅದು ಮಂದಿರದ ಕಟ್ಟನ್ನು ಸಡಿಲಿಸಿ ಕೆಡವಿಬಿಡುವುದೆಂದು—ಅವಳು ಭಯದಿಂದ ರೋಮಾಂಚಿತೆಯಾದಳು.

ಇಡೀ ದಿನ ಮನೆಯೊಳಗೆ ತಂದೆಯನ್ನು ಕಾಣದೆ, "ಅವ್ವಾ, ಅಪ್ಪ ಎಲ್ಲಿ ಹೋಗಿದ್ದಾನೆ? " ಎಂದು ಅನ್ನಪೂರ್ಣೆ ಕೇಳಿದಳು.

"ನನಗೆ ಅಂಜಿಕೊಂಡು ಓಡಿಹೋಗಿದ್ದಾರೆ" ಎಂದು ಹೈಮವತಿ ನಗುತ್ತ ಹೇಳಿದಳು.

ಅನ್ನಪೂರ್ಣೆ ಗಂಭೀರವಾಗಿ ಗೋಣು ಹಾಕುತ್ತ ನುಡಿದಳು: "ನಿನ್ನ ಸಂಗತಿ ಅಪ್ಪ ಮದುವೆಯಾಟ ಆಡಬೇಕು ಎನ್ನುತ್ತಿದ್ದ; ಅದಕ್ಕೆ ನೀನು ಏನಾ

ದರೂ ಅಂದೆಯೇನು? ಚೆಲೆ ಾೀ ಮಾಡಿದೆ! ಮುದುಕರಾಗಿದ್ದೀರಿ, ಮತ್ತೆ ಮದುವೆಯಾಟ! ತಾರಾಪುರದಲ್ಲಿ ಸುಶೀಲ 'ಮದುವೆಯಾಟ ಆಡೋಣ ಬಾ' ಎಂದು ನನ್ನನ್ನು ಕರೆಯುತ್ತಿದ್ದ. 'ಹೋಗೋ ನಿನ, ಗಂಡುಹುಡುಗರು ಅದನ್ನು ಆಡುತ್ತಾರೇನೊ' ಎಂದು ಹೇಳುತ್ತಿದ್ದೆ. ಖೇಂದೀ, ಪಾಂಚಿ, ಫುಂಟಿ ಅವರ ಸಂಗಡ ನಾನು ಮದುವೆಯಾಟ ಆಡುತ್ತಿದ್ದೆ. ಅವ್ವಾ, ಖೇಂದಿ ಬಲ್ರು ಕೆಟ್ಟ ಹುಡುಗಿ ನೋಡು; ಅವಳು ನನ್ನ ಮಗಳನ್ನು ಅತ್ತೆಯ ಮನೆಗೆ ಕಳಿಸು ಎಂದು ಕರೆದುಕೊಂಡು ಹೋದವಳು ತಿರುಗಿ ಕೊಡಲೇ ಇಲ್ಲ. ನೀನು ಅವಳನ್ನು ಬಯ್ಯಬೇಡ ಅವ್ವಾ, ತನ್ನ ಹತ್ತಿರ ಒಂದೂ ಚೆಲೋ ಗೊಂಬೆಯಿಲ್ಲವೆಂದು ಒಯ್ದಿದ್ದಾಳೆ, ಒಯ್ಕೊಳ್ಳಲಿ. ನನಗೆ ಚೆಲೋ ಗೊಂಬೆಗಳು ಎಷ್ಟೋ ಇವೆ, ನೀನು ಸ್ವರ್ಗದಿಂದ ತಂದವು. ಅವನ್ನೆಲ್ಲಾ ಬರುವಾಗ ಇಲ್ಲಿಗೇಕೆ ತರಲಿಲ್ಲ ಅವ್ವಾ?"

"ನಿನಗಿಲ್ಲಿ ಹೊಸ ಗೊಂಬೆ ತಂದು ಕೊಡುತ್ತೇನೆ."

"ಅಪ್ಪ ತಿರುಗಿ ಬಂದಮೇಲೆ ತರಿಸಿ ಕೊಡುವೆಯಾ ?"

"ಹೂಂ."

"ಅಪ್ಪ ಯಾವಾಗ ಬರುತ್ತಾನವ್ವಾ ?"

"ನಾಳೆ ಮುಂಜಾನೆ." ಉದಾಸೀನ ಸ್ವರದಲ್ಲಿ ಹೈಮವತಿ ಹೇಳಿದಳು.

"ಈವೊತ್ತು ನಾಳೆ ಆಗುವುದಲ್ಲ ಅವಾಗೇನು ?" ಅನ್ನಪೂರ್ಣೆ ಗಂಭೀರವಾಗಿ ಪ್ರಶ್ನಿಸಿದಳು.

"ಹೂಂ" ಎಂದು ಹೈಮವತಿ ನಸುನಕ್ಕಳು.

## ೧೮

ಮರುದಿನ ಪ್ರಭಾತದಲ್ಲಿ ಹೈಮವತಿ ಉಪಹಾರವನ್ನು ತಯಾರಿಸುತ್ತಿದ್ದಳು. ಆಗ ಗೋವರ್ಧನನು ಬಂದು ನಿಂತು ನಗುಮೊಗದಿಂದ ಮಾತನಾಡಿದ: "ಏನು ಗೃಹಿಣಿ, ಏನು ನಡೆದಿದೆ ? ಚೆನ್ನಾಗಿದ್ದೀಯಾ ?"

ಮೊದಲ ಕ್ಷಣದಲ್ಲಿ ಹೈಮವತಿಯ ಮೋರೆ ಕೆಂಪಾಯಿತು. ಆ ಬಳಿಕ

ಅವಳೂ ಹಸನ್ಮುಖದಿಂದಲೇ ನುಡಿದಳು: “ಲಗೂನೆ ಸ್ನಾನವನ್ನು ಮಾಡಿ ಪೂಜೆಯನ್ನು ತೀರಿಸಿರಿ. ಬೇಗನೆ. ಸ್ವಲ್ಪ ಏನನ್ನಾದರೂ ತೆಗೆದುಕೊಳ್ಳಿರಿ. ನಿನ್ನೆ ಇಡೀ ದಿನವೆಲ್ಲ ಎಲ್ಲಿದ್ದಿರೋ, ಏನು ತಿಂದಿರೋ ಏನು ಬಿಟ್ಟಿರೊ ”

ಗೋವರ್ಧನನ ಮನಸಿಗೆ ತಣಿವಿನಿಂದ ನಲವೇರಿತು. “ನಿನಗಂಜಿ ಕೊಂಡು ನಿನ್ನೆ ಓಡಿಹೋಗಿದ್ದೆ” ಎಂದ ನಗುತ್ತ.

ಅವಳು ಲಜ್ಜೆಯನ್ನು ಯತ್ನಪೂರ್ವಕವಾಗಿ ದಮನಿಸಿದಳು. ಅವನ ವಿನೋದದ ನುಡಿಗೆ ಸಹಜಭಾವದಿಂದ ಉತ್ತರವಿತ್ತಳು: “ನನ್ನ ಅಂಜಿಕೆ ಯಿಂದಲೋ ಏನು ನಿಮ್ಮ ಅಂಜಿಕೆಯಿಂದಲೋ ?”

“ಹಾಗೆನ್ನುವುದಾದರೆ ಇಬ್ಬರ ಅಂಜಿಕೆಯಿಂದಲೂ.”

ಉಪಹಾರವನ್ನು ತಯಾರಿಸುವ ನೆವದಿಂದ, ಮೋರೆಯ ಮೇಲೆ ತೇಲುವ ನಾಚಿಕೆಯನ್ನು ಮರೆಮಾಡಲು ಮುಖವನ್ನು ತಗ್ಗಿಸಿ ಹೈಮವತಿ ಹೇಳಿದಳು: “ಸರಿ ಸರಿ, ಮಾತಿನ ಭಟ್ಟಾಚಾರ್ಯರೆ, ಹೋಗಿರಿನ್ನು.”

ಗೋವರ್ಧನನು ನಗುನಗುತ್ತ ಹೊರಟುಹೋದ.

ಅವನ ಇಡೀ ದಿನ ಆನಂದದಲ್ಲಿ ಕಳೆಯಿತು ಸಂಜೆಯ ಹೊತ್ತಿನಲ್ಲಿ ಹೈಮವತಿಗೆ ಅವನೆಂದ: “ನಾನು ಸ್ವಲ್ಪ ತಿರುಗಾಡಿಕೊಂಡು ಬರುತ್ತೇನೆ.”

ರಾತ್ರಿಯಲ್ಲಿ ಗೋವರ್ಧನನು ಮರಳಿ ಬಂದಾಗ ಅವಳು ಅಡಿಗೆಗೆ ಕುಳಿತಿದ್ದಳು. ಅನ್ನಪೂರ್ಣೆ ಅವಳ ಬಳಿ ಕುಳಿತು ಹರಟೆ ಹಚ್ಚಿದ್ದಳು. ಅವನು ಮೆಲ್ಲಗೆ ಕಳ್ಳ ಹೆಜ್ಜೆಯಿಡುತ್ತ ಮನೆಯೊಳಕ್ಕೆ ಬಂದು, ಗೋಡೆಗೆ ನೆವರಿಕೊಂಡೇ ಮುಂದುವರಿದು ಅಟ್ಟವನ್ನೇರಿ ಹೋದ. ತಾಯಿ ಮಕ್ಕಳಿಗಿಬ್ಬರಿಗೂ ಅವನು ಬಂದುದು ಗೊತ್ತಾಗಲಿಲ್ಲ.

“ಓಃ, ಎಲ್ಲಿಂದಲೋ ಎಂತಹ ಒಳ್ಳೆಯ ಹೂವಿನ ಸುವಾಸನೆ ಬಂತು ಅನೂ!” ಎಂದಳು ಹೈಮವತಿ.

“ಈ ಬೀದಿಯ ಆಕಡೆ ಒಂದು ಮನೆಯ ಮುಂದೆ ಬಹಳ ಹೂವಿನ ಗಿಡ ಇವೆ ಅವ್ವಾ, ಅಪ್ಪನ ಸಂಗತಿ ತಿರುಗಾಡಲಿಕ್ಕೆ ಹೋದಾಗ ಆವೊತ್ತು ನೋಡಿದ್ದೇನೆ.”

ಅನ್ನಪೂರ್ಣೆಯು ಅನುಮಾನಕ್ಕಾಗಿ ಹೈಮವತಿ ನಕ್ಕಳು. ಕೊಂಚ ಹೊತ್ತಿನಲ್ಲಿ ಗೋವರ್ಧನನು ಅಡಿಗೆಮನೆಯ ಬಾಗಿಲಿಗೆ ಬಂದು ನಿಂತು 'ಅವಕ್' ಎಂದ. ಇಬ್ಬರೂ ಬೆಚ್ಚಿಬಿದ್ದರು. ಅವನು ಒಳಗೆ ಹೋಗಿ ನಗ-ಲಾರಂಭಿಸಿದ. ಹಾಗೆ ಸದ್ದು ಮಾಡಿದವನು ಅಪ್ಪನಾದುದನ್ನು ತಿಳಿದು ಅನ್ನ ಪೂರ್ಣೆಗೆ ಧೈರ್ಯ ಬಂದಿತು. "ಅಪ್ಪಾ, ಎಂಥ ಅಂಜಿದೆ ನಾನು," ಎಂದಳು.

"ಅಪ್ಪಯ್ಯ! ಮುದುಕರಾದಿರಿ, ಇನ್ನೂ ಹುಡುಗಾಟಿಕೆ ಬಿಡಲಿಲ್ಲ. ನಿಜ ವಾಗಿಯೂ ಹೆದರಿಬಿಟ್ಟಿದ್ದೆ—ಎದೆ ಇನ್ನೂ ಥಕ್‌ಥಕ್ ಎನ್ನುತ್ತಿದೆ. ಕಳ್ಳ ರಂತೆ ಯಾವಾಗ ಬಂದರು ಮಹಾಶಯರು?" ಎಂದು ಹೈಮವತಿ ನಕ್ಕು ನುಡಿದಳು.

ಅವನು ನಗುನಗುತ್ತ ಮಾರುನುಡಿದ: "ನೀನೆಂಥ ಎಚ್ಚರುಗೇಡಿ! ಯಾವನಾದರೂ ಕಳ್ಳ ಬಂದು ನಿನ್ನನ್ನೇ ಕದ್ದೊಯ್ದರೂ ನಿನಗೆ ಗೊತ್ತಾಗುವು ದಿಲ್ಲ!"

ತೆಳುದುಟಿಯ ಕೊಂಕುಗೊನೆಯಲ್ಲಿ ಕೌತುಕದ ಮಂದಹಾಸವನ್ನು ಅಡ ಕಿಸಿ ಹೈಮವತಿ, "ಕಳ್ಳರು ತಮ್ಮ ವ್ಯವಸಾಯಬಂಧುಗಳ ಮನೆಗೆ ಕಳವಿಗೆ ಬರುವುದಿಲ್ಲ," ಎಂದು ಹೇಳಿದಳು.

ಅಶಿಕ್ಷಿತನಾದ ಅಲ್ಪಬುದ್ಧಿಯ ಗೋವರ್ಧನನಿಗೆ ಈ ಮಾತಿನ ಇಂಗಿ ತವು ತಿಳಿಯಲಿಲ್ಲ. "ವ್ಯವಸಾಯಬಂಧುಗಳು ಎಂದರೆ ಯಾರು?" ಎಂದು ಅವನು ಪ್ರಶ್ನಿಸಿದ.

"ಕಳ್ಳರು—ಕಳ್ಳರು."

ಗಹಗಹಿಸಿ ನಕ್ಕು ಅವನೆಂದ: "ನೀನು ಕಳವಿನ ವಸ್ತು, ಅಲ್ಲವೆ?"

ತನ್ನ ನಗೆಚಾಟಿಕೆ ತನಗೇ ತಿರುಗಿದುದರಿಂದ ಹೈಮವತಿಯ ಮೋರೆ ಕೆಂಡದಂತೆ ಬಿಸಿಯಾಯಿತು, ಕೆಂಪಗಾಯಿತು. ಅವಳು ಮೆಲ್ಲಗೆ ಕಾಣದಂತೆ ಒಲೆಯೊಳಗೆ ಒಂದು ಮೆಣಸಿನಕಾಯಿಯನ್ನು ಒಗೆದು ಕೆಮ್ಮುತ್ತ, "ಈಗಿಲ್ಲಿಂದ ಕಾಲ್ಕಿತ್ತಿರಿ, ಅಡಿಗೆಯಾಯಿತೆಂದರೆ ಕರೆಯುತ್ತೇನೆ," ಎಂದು ನುಡಿದಳು.

ಗೋವರ್ಧನನು ಅನ್ನಪೂರ್ಣೆಯನ್ನೆತ್ತಿಕೊಂಡು ಹಾಂಚಿ ಹಾಂಚಿ ಎಂದು ಸೀನುತ್ತ ಆ ಸ್ಥಳದಿಂದ ಓಡಿದ.

ಎಲ್ಲರ ಊಟವೂ ಮುಗಿದ ಬಳಿಕ ಬಟ್ಟೆ ಬದಲಿಸಿ ಹೈಮವತಿ ಮಲಗಲೆಂದು ಅಟ್ಟವನ್ನೇರಿ ಹೋದಳು. ಮೆಟ್ಟಲುಗಳನ್ನೇರುತ್ತಿರುವಾಗ ಹೂಗಳ ನರುಗಂಪು ಅವಳನ್ನು ಅಚ್ಚರಿಗೊಳಿಸಿತು. ಈ ಹೂಗಳು ಎಲ್ಲಿ ಅರಳಿವೆ? ತನ್ನ ಕೋಣೆ ಹತ್ತಿರ ಹತ್ತಿರವಾದಂತೆ ಕಂಪು ಹೆಚ್ಚು ಹೆಚ್ಚು ದಟ್ಟವಾಯಿತು. ಬಾಗಿಲನ್ನು ತೆರೆದು ನೋಡಿದಳು — ಅವಳಿಗಿಂದು ಹಾಸಿಗೆ ಹೂಗಳದು! ಮಾಸಿದ ಸಾಮಾನ್ಯವಾದ ಮಗ್ಗುಲುಹಾಸಿಗೆಯ ಬದಲು ಹೂಗಳನ್ನು ಕೆಚ್ಚಿದ ಮಗ್ಗುಲುಹಾಸಿಗೆ ಹಾಸಲಾಗಿದೆ. ಹಾಸಿಗೆಯ ನಾಲ್ಕು ಅಂಚುಗಳಲ್ಲಿಯೂ ತಲೆದಿಂಬಿನ ಸುತ್ತಲೂ ಗುಲಾಬಿ-ಕುಂದ-ಚಂದ್ರಮಲ್ಲಿಗೆ ಮೊದಲಾದ ಬಗೆ-ಬಗೆಯ ಹೂಗಳ ಅಗಲವಾದ ದಂಡೆ ಕಟ್ಟಿದೆ. ತಲೆದಿಂಬು ದಿಸೆಯ ಎರಡೂ ಮಗ್ಗುಲಲ್ಲಿ ಎರಡು ಹೊಸ ಸಮೆಗಳು ಉರಿಯುತ್ತಿವೆ. ಅವುಗಳ ಮಧ್ಯದಲ್ಲಿ ನಿಂತಿದ್ದಾನೆ—ಆನಂದಪುಲಕಿತ ಕೃತಾರ್ಥಮೂರ್ತಿ ಗೋವರ್ಧನ!

ನಾಚಿಕೆಯಿಂದ, ಸಿಟ್ಟಿನಿಂದ ಹೈಮವತಿಯ ಮುಖವು ಕಾಡಿಗೆಹಿಡಿದಂತೆ ಕಪ್ಪಾಯಿತು. ಅವಳನ್ನು ಕಂಡು ಗೋವರ್ಧನನು ಬಿನ್ನವಿಸಿಕೊಂಡ: "ನೀನೊಮ್ಮೆ ಹಾಸಿಗೆಯ ಮೇಲೆ ಬಂದು ಕೂಡು; ನಾನೊಂದಿಷ್ಟೇ ನೋಡಿ ಹೊರಟು ಹೋಗುತ್ತೇನೆ."

ಅವಳ ಬಾಯಿಯಿಂದ ಬಹು ಪ್ರಯಾಸದಿಂದ ಮಾತು ಹೊರಟಿತು: "ನಿಮ್ಮ ಆಶ್ರಿತಳು ನಾನು. ನನ್ನನ್ನು ಪ್ರಲೋಭನಗಳಿಂದ ಅಪಮಾನಗೊಳಿಸುವುದು ನಿಮಗೆ ತಕ್ಕುದಲ್ಲ."

ಲಜ್ಜೆಯಿಂದ ಅಪ್ರತಿಭನಾಗಿ ಗೋವರ್ಧನನು ತತ್‌ಕ್ಷಣ, "ಇಲ್ಲಿಲ್ಲ, ಪೂಜೆಯ ಪುಷ್ಪಾಂಜಲಿ, ಮತ್ತೇನೂ ಅಲ್ಲ," ಎಂದು ನುಡಿದು ತಲೆಯನ್ನು ತಗ್ಗಿಸಿಕೊಂಡು ನಿಧಾನವಾಗಿ ಕೋಣೆಯಿಂದ ಹೊರಹೊರಟ.

ಕಳ್ಳನಂತೆ ಕುಂಠಿತನಾಗಿ ಅವನು ತನ್ನ ಕೋಣೆಯೊಳಗೆ ಅಡಗಿಕೊಳ್ಳುತ್ತಲೇ, ಹೈಮವತಿ ತನ್ನ ಕೋಣೆಯನ್ನು ಸೇರಿ ಧಡಾರನೆ ಬಾಗಿಲನ್ನಿಕ್ಕಿಕೊಂಡಳು. ಆ ಶಬ್ದ ಗೋವರ್ಧನನ ಎದೆಗೆ ನಿಷ್ಠುರವಾದ ಆಘಾತ.

ಹೂವಿನ ಹಾಸಿಗೆಯ ಕಡೆ ಮೊಗದಿರುವಿ ನಿಲ್ಲುತ್ತಲೇ ಹೈಮವತಿಯ ಉರಿಗಣ್ಣು ಕ್ರಮದಿಂದ ಕೋಮಲವಾಗಿ ಅಶ್ರುಜಲದಿಂದ ಅಭಿಷಿಕ್ತವಾಯಿತು.

ಹೂಗಳನ್ನೆಲ್ಲಾ ಕಾಲಿನಿಂದೊದೆದು ಕಚಪಚ ತುಳಿದುಬಿಡಬೇಕೆಂದು ಮೊದ-ಲವಳು ಬಗೆದಿದ್ದಳು; ಆ ಕೆಲಸ ಈಗ ಆಗದಾಯಿತು. ಅವಳು ಮೆಲ್ಲಮೆಲ್ಲನೆ ಹೋಗಿ ಗೋವರ್ಧನನು ಹಾಸಿಟ್ಟಿದ್ದ ಬೆಳ್ಳನೆಯ ಹಾಸಿಗೆಯ ಮೇಲೆ ಉರುಳಿ ಕೊಂಡಳು. ರಾತ್ರಿ ಬೆಳತನಕ ಆವಳೊಂದಿಗೆ ಹೂಗಳೂ ಸುಗಂಧದ ನಿಟ್ಟು-ಸಿರನ್ನು ಬಿಡುತ್ತಿದ್ದವು.

ಗೋವರ್ಧನನು ತನ್ನ ಕೋಣೆಯೊಳಗೆ ಕತ್ತಲಲ್ಲಿ ಬಿದ್ದುಕೊಂಡು ವಿಚಾರಮಗ್ನನಾದ. ಹೈಮವತಿಯಿಂದ ತನಗಾದ ಅಪಮಾನವನ್ನು ನೆನೆದು ಮೊದಲವನಿಗೆ ಸಿಟ್ಟು ಬಂದಿತು. ಮರುಕ್ಷಣವೇ ಅವಳ ಮನೋದಾರ್ಢ್ಯ ಅವಳ ನಿಷ್ಠೆಗಳನ್ನು ನೆನೆದಾಗ ಅವಳ ಬಗೆಗೆ ಗೌರವಶ್ರದ್ಧೆಗಳು ಉದಿಸಿ ಸಿಟ್ಟನ್ನು ಮರೆಸಿದವು. ಅವನು ಮುಂಚೆ ತಿಳಿದಿದ್ದ—ತಾನು ವಿಧವಾವಿವಾಹ ವನ್ನು ಮಾಡಿಕೊಳ್ಳುವುದು ಅವಳ ಲಜ್ಜೆಯನ್ನು ಕಾಯುವುದಕ್ಕಾಗಿ ಅಷ್ಟೆ, ವಿಧವೆಯನ್ನು ವಾಸ್ತವ ಪತ್ನಿಯನ್ನಾಗಿ ಪರಿಗ್ರಹಿಸುವುದು ಎಂದೂ ಸಾಧ್ಯವಿಲ್ಲ ಎಂದು. ಎಂತಲೇ ಅವನು ಅನಾಯಾಸವಾಗಿ ಕಾಲಿಯ ಪಾದ ಮುಟ್ಟಿ ಪ್ರತಿಜ್ಞೆ ಮಾಡಿದುದು. ಈಗ, ಮದುವೆಯಾದ ಬಳಿಕ ಅವನ ಮನಸು ಸ್ವಾಮಿತ್ವದ ಹಕ್ಕನ್ನು ಪ್ರಸ್ಥಾಪಿಸುವುದಕ್ಕಾಗಿ ವ್ಯಾಕುಲಗೊಳ್ಳತೊಡಗಿತು. ಪ್ರತಿಜ್ಞೆ ನೆನಪಿಗೆ ಬಂದಾಗ ಸಂಯಮದಿಂದಿರುವುದೇ ಉಚಿತವೆಂದೆನಿಸುವುದು; ಮನಸಿನ ಈ ಯೋಚನೆಗೆ ಸಮಾಧಾನವನ್ನೂ ಹೇಳುತ್ತಿದ್ದ—ಕಾಲಿ ಹಿಂದು ಗಳ ದೇವತೆ, ನಾನು ಹಿಂದುವಲ್ಲವೆಂದು ಘೋಷಿಸಿಯೇ ಹಿಂದುಗಳಲ್ಲಿ ನಿಷಿದ್ಧ ವಾದ ವಿಧವಾವಿವಾಹ ಮಾಡಿಕೊಂಡಿದ್ದೇನೆ, ಎಂದ ಬಳಿಕ ಆ ಕಾಲಿಯ ಭಯ ನನಗೇನು? ಮತ್ತೆ, ಉಂಹೂ, ಇವೆಲ್ಲ ಹೊಲ್ಲ, ನಾನೇ ಬಾಯಿಮುಟ್ಟ ಆಣೆ ಯಿಟ್ಟುಕೊಂಡಿದ್ದೇನೆ, ಹಿಂದುವಲ್ಲವೆಂದು ಹೇಳಿದ್ದರೂ ನಾನು ನಾನೇ, ನನ್ನ ಮಾತನ್ನು ನಾನು ಮರೆಯಲಾಗದು ಎಂದು ದೃಢಪಡಿಸಿಕೊಳ್ಳುತ್ತಿದ್ದ. ಬೆಳ-ತನಕ ಸರಿಯಾಗಿ ನಿದ್ದೆ ಮಾಡದೆ ತೀರ ನಸುಕಿನಲ್ಲಿಯೇ ಎದ್ದು, ಹೈಮವತಿಯ ಕೋಣೆಯ ಮುಚ್ಚಿದ ಬಾಗಿಲ ಹತ್ತಿರ ಹೋಗಿ ನಿಂತುಕೊಂಡ.

ಕುಸುಮಗಳ ಉಗ್ರವಾಸನೆಯಿಂದ ಇನ್ನೂ ರಾತ್ರಿ ಇರುವಾಗಲೇ ಅನ್ನ-ಪೂರ್ಣೆಯ ನಿದ್ದೆ ಹಾರಿತು. "ಅವ್ವಾ, ಇಷ್ಟು ಹೂ ಯಾರು ತಂದರು?" ಎಂದು ಪ್ರಶ್ನಿಸಿದಳು.

"ನಿಮ್ಮ ತಂದೆ."

"ಇಷ್ಟು ಯಾಕವ್ವ ? ನಾನು ತಕ್ಕೊಳ್ಳಲೆ ?"

"ಬೇಡ, ಈ ಹೂ ನನ್ನವು. ನಿಮ್ಮ ತಂದೆ ನನಗೆ ಕೊಟ್ಟಿದ್ದಾರೆ."

"ಅಪ್ಪ ನಿನಗೆ ಹೂವಿನ ಪೂಜೆ ಕಟ್ಟಿದನೆ ? ಪೂಜೆಯ ಹೂ ತೆಗೆದು ಕೊಳ್ಳಬಾರದೇನು ? ತುಳಿದರೆ ಪಾಪ ಬರುತ್ತದಲ್ಲವೆ ?"

"ಹಾಂ." ಹೈಮವತಿ ನಕ್ಕಳು.

ತಾಯಿ ಮಗಳಲ್ಲಿ ನಡೆದ ಸಂಭಾಷಣೆಯನ್ನು ಕೇಳಿ ಗೋವರ್ಧನನು ಕೌತುಕಪಟ್ಟು ಹರುಷದಿಂದ ಹೊರಟುಹೋದ.

ಹೈಮವತಿ ಎದ್ದು ಬೇಗನೆ ಸ್ನಾನಮಾಡಿ ಅಡುಗೆಮನೆಗೆ ಹೋಗ ಬೇಕೆಂದು ಕೆಳಗಿಳಿಯುತ್ತಿದ್ದಳು. ನಡುಮೆಟ್ಟಿಲಲ್ಲಿ ಗೋವರ್ಧನನ ದರ್ಶನ ವಾಯಿತು. ಅವಳು ಕುಂಠಿತಳಾಗಿ ಮೋರೆ ಕೆಳಗೆ ಹಾಕಿಕೊಂಡು ನಿಂತು ಬಿಟ್ಟಳು. ನಿನ್ನೆ ರಾತ್ರಿ ಮನಸಿಗೆ ಹಿಡಿಯುವಂತಹದೇನೂ ನಡೆಯಲಿಲ್ಲ-ವೆಂಬಂತೆ ಅತಿ ಸಹಜಭಾವದಿಂದ ಗೋವರ್ಧನನು ಮಾತನಾಡಿದ: "ನಿದ್ದೆ ಬಿಟ್ಟಿತೆ ? ಈವೊತ್ತು ಕೊಂಚ ಶೀಘ್ರವೇ ಅಡಿಗೆ ಮಾಡು, ಅನೂನ ತಾಯಿ. ನಾನು ಕಲಾಶಾಲೆಗೆ ಸೇರಬೇಕೆಂದು ನಿರ್ಧರಿಸಿದ್ದೇನೆ. ಈಗ ಚಿತ್ರಕಲೆ ಸ್ವಲ್ಪ ಬರುತ್ತದೆ, ಇನ್ನಿಷ್ಟು ಕಲಿತೆನೆಂದರೆ ಕಲಕತ್ತೆಯಲ್ಲಿ ಕೆಲಸದ ಬಗ್ಗೆ ಯೋಚಿಸ ಬೇಕಾಗಿಲ್ಲ. ನೀನೇನೆನ್ನುತ್ತಿ? ಇಡೀ ಹಗಲು ಮನೆಯೊಳಗೆ ನೀನೊಬ್ಬಾಕೆಯೆ ಇರಬೇಕಾಗುವುದು. ನಾನು ಶಾಲೆಯಲ್ಲಿ ಕಲಿತು ಬಂದು, ಮನೆಯಲ್ಲಿ ನಿನಗೆ ಕಲಿಸಬೇಕೆಂದು ಮಾಡಿದ್ದೇನೆ. ಎಂದರೆ ನಾನಿಲ್ಲದಾಗಲೂ ಚಿತ್ರ ತೆಗೆ-ಯುವುದರಲ್ಲಿ ಬೇಸರವನ್ನು ಕಳೆಯಬಹುದು ನೀನು. ಇಬ್ಬರೂ ಚಿತ್ರ ತೆಗೆ ದರೆ ನಮ್ಮ ಗಳಿಕೆಯೂ ಇಮ್ಮಡಿಯಾಗಿ ಹೆಚ್ಚುವುದು."

ಸದ್ಯ ಬಿಡುಗಡೆಯಾಯಿತೆಂಬ ಸಮಾಧಾನದ ಉಸಿರು ಬಿಟ್ಟು, ಕೆಳ ಗಿಳಿಯುತ್ತ ಇಳಿಯುತ್ತ ಹೈಮವತಿ ಹೇಳಿದಳು: "ಎಂಟರೊಳಗೇ ನನ್ನಡಿಗೆ ಯಾಗುತ್ತದೆ."

## ೧೯

ತಾರಾಪುರದಲ್ಲಿದ್ದ ಹೈಮವತಿಯ ವಿವಾಹ ವಿಷಯಕವಾದ ಆಂದೋ-ಲನವು ನಿಂತುಹೋಗಿದೆ. ವಿಧವೆಯಾದ ಮಗಳನ್ನು ಮದುವೆಮಾಡಿಕೊಟ್ಟ ರೆಂಬ ತಪ್ಪಿಗಾಗಿ ವಂಶಲೋಚನರಿಗೆ ಬಹಿಷ್ಕಾರ ಹಾಕಿದುದಷ್ಟೇ ಆಯಿತು. ಅದರಿಂದ ಊರ ದೈವದವರಿಗೆ ಮನೋರಂಜನೆಯೇನೂ ಆಗಲಿಲ್ಲ. ವಂಶ-ಲೋಚನರು ಮೊದಲಿನಂತೆಯೇ— ತಾವಾಯಿತು ಕಾಲೀಪೂಜೆಯಾಯಿತು — ಇದ್ದುಬಿಟ್ಟರು. ಆಗಲೂ ಮಂದಿಯ ಗೊಡವೆಗೆ ಹೋಗುತ್ತಿರಲಿಲ್ಲ, ಈಗಲೂ ಇಲ್ಲ. ಜನ ಎಂಟು ದಿನ ಕೂಡ ಸ್ವಾರಸ್ಯವನ್ನನುಭವಿಸಲಿಲ್ಲ. ಈಗ ಮದುವೆಯಾಗಿ ಎರಡು ತಿಂಗಳು ಸಂದಿವೆ; ಮಂದಿಯ ಹುರುಪು-ಹುಮ್ಮಸ್ಸು ತಗ್ಗಿಹೋಗಿದೆ.

ಮಾಘ. ರಾತ್ರಿ ಒಂದೊ ಎರಡೋ. ಚಳಿಯ ಕಡ್ಡಾಯದ ಆಳಿಕೆ. ಊರೆಲ್ಲ ನಿಃಸ್ತಬ್ಧ. ಒಂದು ಪ್ರಾಣಿಯ ಸುಳಿವೂ ಇಲ್ಲ. ಮಂಜಿನ ಮುಸುಕಿನಲ್ಲಿ ಚಂದ್ರನಿಗೂ ನಡುಕ ಹಿಡಿದಿದೆ. ಮುದುಕ ಚೌಕಿದಾರ ಹರ ಸರ್ದಾರನು ಗಸ್ತು ತಿರುಗುತ್ತಿದ್ದ. ಮನೆಮನೆಗೂ ಕೂಗಿ ಜನರನ್ನೆಚ್ಚರಿಸುತ್ತಿದ್ದ. ಅವನ ಕೂಗಿಗೆ ಕಳ್ಳರು ಕಾಕರು ಬೆದರುತ್ತಿದ್ದರೋ ಇಲ್ಲವೋ ತಿಳಿಯದು; ಮಕ್ಕಳು ಮರಿಗಳು ಮಾತ್ರ ಅಂಜಿ ಅಳುತ್ತಿದ್ದವು. ಹಿಂದಕ್ಕೆ ಹರಸರ್ದಾರನು ಕಳ್ಳರ ಕೂಟದ ಮುಂದಾಳು, ಇತ್ತೀಚೆಗೆ ಪೋಲಿಸ್ ಪಡೆಯನ್ನು ಸೇರಿದ್ದಾನೆ. ಅವನ ಕೂಗಿಗೆ ಬಹಳ ಜನ ಅಂಜುತ್ತಿದ್ದರು. ಸ್ವತಃ ಹರಸರ್ದಾರನಿಗೂ ಭಯ ಕಡಿಮೆಯಿರಲಿಲ್ಲ; ಆ ಭಯ ಭೂತಗಳದು. ಅವು ಊರಲ್ಲಿ ಎಲ್ಲೆಲ್ಲಿರುವ-ವೆಂಬುದನ್ನು ಅವನು ಬಲ್ಲ. ಅವನೆಂದೂ ಭೂತಗಳ ಹೆಸರನ್ನು ಉಚ್ಚರಿಸುತ್ತಿರಲಿಲ್ಲ; ಏಕೆಂದರೆ ಅವು ಅದರಿಂದ ಕೋಪಗೊಳ್ಳುವವಂತೆ. ಆದುದರಿಂದ ಭೂತಗಳ ಮಾತು ಬಂದಾಗ ಸರ್ವನಾಮದಿಂದಲೇ ನಿರ್ದೇಶಿಸುತ್ತಾನೆ— ಅವು, ಅವನ್ನು ಇತ್ಯಾದಿ. ಎಲ್ಲೆಲ್ಲಿ 'ಅವುಗಳ'ವಾಸವೆಂದು ಅವನ ಭಾವನೆಯೋ ಅಲ್ಲಿ ಹಾಯ್ದಾಡುವಾಗ ಅವನ ಎದೆನೆತ್ತರು ನೀರಾಗುವುದು ಆದರೆ ಹೊಟ್ಟೆಪಾಡಿಗಾಗಿ ತಿರುಗದೆ ವಿಧಿಯಿರಲಿಲ್ಲ.

ವಂಶಲೋಚನರ ಮನೆಯ ಹಿಂಬದಿಯ ಸಂದಿಯ ಪಕ್ಕದಲ್ಲಿ ದೊಡ್ಡದೊಂದು ಹಳೆಯ ಹುಣಿಸೆಮರವಿತ್ತು. ಹರಸರ್ದಾರನ ಅಭಿಪ್ರಾಯದ ಮೇರೆಗೆ ಅದೂ ಒಂದು 'ಅವುಗಳ' ಬೀಡಾರ. ಅದರ ದಟ್ಟವಾದ ನೆರಳಲ್ಲಿ ಹಾಯುವಾಗ ಅವನೆದೆ ಡವಡವ ಎನ್ನುವುದು. ಇಂದೂ ಹಾಗೆಯೇ ಆಯಿತು. ಅವನು ಅತ್ತಿತ್ತ ನೋಡದೆ ಶೀಘ್ರವೇ 'ಅವುಗಳ' ಗಡಿಯನ್ನು ದಾಟಬೇಕೆಂದು ಓಡುತ್ತಲಿದ್ದ. ಹಠಾತ್ ಎದುರಿಗೆ ದೃಷ್ಟಿ ಹೋಯಿತು. ವಂಶಲೋಚನರ ಮನೆಯ ಕೋಣೆಯ ಹತ್ತಿರ ಯಾರೋ ಒಬ್ಬರು ಹಣಿಕಿ ಹಣಿಕಿ ನೋಡುತ್ತಿರುವಂತೆ ಕಂಡಿತು. ಭಯಗೊಂಡು ಹರಸರ್ದಾರ ಕೂಗಿದ: "ಯಾರವರು?"

ಆ ಮೂರ್ತಿ ಬೆಚ್ಚಿ ತಿರುಗಿ ನಿಂತು ಉತ್ತರವಿತ್ತಿತು: "ನಾನು ಸರ್ದ್ದಾರ."

'ಅವುಗಳ' ಗೊಗ್ಗರು ದನಿಯ ಬದಲಾಗಿ ಮಾನವನ ಸಹಜ ಸ್ವರವನ್ನು ಕೇಳಿ ಸರ್ದಾರನಿಗೆ ಕೊಂಚ ಧೈರ್ಯ ಬಂದಿತು. "ನಾನು ಎಂದರೆ? ಹೆಸರೇನು?" ಎಂದು ಮತ್ತೆ ಪ್ರಶ್ನಿಸಿದ.

ಮುಖದ ಮುಸುಕನ್ನು ತೆಗೆದು ಆ ಮೂರ್ತಿಯೆಂದಿತು: "ಹರಸರ್ದ್ದಾರ, ನಾನು ತರಲ!"

ಸರದಾರನು ದಿಟ್ಟಿಸಿದ, ತರಲನೇ. ಆದರೆ ಜೀವಂತ ತರಲನಲ್ಲವೇ ಅಲ್ಲ. ಮುಖ ಶೀರ್ಣವಾಗಿದೆ, ಬಣ್ಣ ಪಾಂಡುರವಾಗಿದೆ. ಹರಸರ್ದಾರ ಭಯದಿಂದ ಬೇಡಿಕೊಂಡ: "ನಿಲ್ಲಪ್ಪಾ ನಿಲ್ಲು; ನಾನಂತೂ ನಿನಗೆ ಏನೊಂದೂ ಅಂದಿಲ್ಲ, ಆಡಿಲ್ಲ, ಹೋಗು."

ತರಲನು ಹೈಮವತಿಯನ್ನು ಪ್ರೀತಿಸಿದುದು, ಅವಳನ್ನು ಮದುವೆಯಾಗಲು ಬಯಸಿದುದು, ಊರವರೆಲ್ಲ ಅವನನ್ನು ತಿರಸ್ಕರಿಸಿದುದು, ಅದರಿಂದ ಅವನು ಊರನ್ನೇ ಬಿಟ್ಟು ಹೋದುದು, ದಾರಿಯಲ್ಲಿಯೇ ಉಗಿಬಂಡಿಯ ಅಪಘಾತಕ್ಕೀಡಾಗಿ ಸತ್ತುದು—ಎಲ್ಲವನ್ನೂ ಹರಸರ್ದಾರನು ಕೇಳಿದ್ದ. ಸತ್ತವನು ಮತ್ತೆ ರೂಪ ತಾಳಿ ಮಾತನಾಡುವುದೆಂದರೆ ಭೂತವಲ್ಲದೆ ಮತ್ತೇನು? ಸರ್ದಾರನು ತನ್ನ ನಡೆಯ ದಿಕ್ಕನ್ನು ಬದಲಿಸಿ ಬಂದ ಹಾದಿಯಲ್ಲಿಯೇ ಹಿಂದಿರುಗಿದ. ಹೋಗುಹೋಗುತ್ತ ಅವನೆಂದ: "ಅಯ್ಯೋ ತಮ್ಮಾ, ನೀನು ಸತ್ತಿದ್ದರೂ ಹಿಮಿಬಾಮುನಿಯ ಕೋಣೆಯ ಕಿಡಿಕಿಯ ಹತ್ತಿರ ಸುಳಿಯುತ್ತಿದ್ದೀ. ಅವಳೇನು

ಇದ್ದಾಳೆಂದು ಬಗೆದೆಯಾ? ಗೋವರ್ಧನ ಠಾಕುರನು ಅವಳನ್ನು ತೆಗೆದು ಕೊಂಡು ಹೋಗಿ ಕಲಕತ್ತೆಯಲ್ಲಿದ್ದಾನಂತೆ. 'ನಿಮಗೆ' ಅಗೋಚರವಾದದ್ದು ಯಾವುದೂ ಇಲ್ಲ ತವಪ್ಪಾ. ಅಲ್ಲಿಗೆ ಹೋಗಬಾರದೇ? ಅವರ ಕತ್ತು ಹಿಸುಕ-ಬಾರದೆ? ಇಲ್ಲಿ ಬಂದು ನಮ್ಮನ್ನೇಕೆ ಹೆದರಿಸುತ್ತೀಯಪ್ಪ? ನನ್ನ ಬೆನ್ನು ಹತ್ತುತ್ತೀಯೇಕಪ್ಪ?........"

ಹರಸರ್ದಾರನು ತನ್ನಷ್ಟಕ್ಕೆ ತಾನೇ ಬಡಬಡಿಸುತ್ತ ಹೊರಟಿದ್ದ ನಿಜ. ಆದರೆ 'ಅದು' ತನ್ನನ್ನು ಹಿಂಬಾಲಿಸಿದೆಯೆಂಬುದು ಅವನಿಗೆ ತಿರುಗಿ ನೋಡದೆಯೂ ಗೊತ್ತಾಯಿತು. ಸ್ವಲ್ಪ ದೂರ ಹೋದಬಳಿಕ ಹಿಂದಾಗುತ್ತಿದ್ದ ಹೆಜ್ಜೆಯ ಸದ್ದು ಅಡಗಿತು. ಅವನು ಕತ್ತನ್ನು ಮಾತ್ರ ಹೊರಳಿಸಿ ಅಂಜುತ್ತಂಜುತ್ತ ಕೊನೆಗಣ್ಣಿನಿಂದ ನೋಡಿದ. ಯಾರೂ ಇರಲಿಲ್ಲ. ಆಗವನು ಸಾಕಪ್ಪ ಬದುಕಿದೆ ಎಂದು ತಡೆದಿದ್ದ ಉಸಿರನ್ನು ಹೊರಹಾಕಿದ.

ಮರುದಿನ ಬೆಳಗಿನಲ್ಲಿಯೆ ಹರಸರ್ದಾರನಿಂದ ಊರಲ್ಲೆಲ್ಲಾ ಪ್ರಚುರವಾಯಿತು—ತರಲನು ದೆವ್ವವಾಗಿ ಹೈಮವತಿಯ ಕೋಣೆಯ ಹತ್ತಿರ ಸುಳಿ-ದಾಡುತ್ತಿದ್ದಾನೆಂದು; ಗಯೆಯಲ್ಲಿ ಪಿಂಡಪ್ರದಾನಮಾಡಿ ತನ್ನನ್ನು ಈ ಮಾಯೆಯಿಂದ ಉದ್ಧರಿಸಬೇಕೆಂದು ಅವನು ಗೊಗ್ಗರು ದನಿಯಲ್ಲಿ ಸರದಾರನಿಗೆ ಹೇಳಿದನೆಂದು. ಇದನ್ನು ಕೇಳಿದ ತರಲನ ಮಾವನ ಕಣ್ಣೊಳಗೆ ನೀರುಬಂದಿತು—ಅಳಿಯನ ಮರಣದುಃಖದಿಂದ ಸ್ವಲ್ಪ, ಹೈಮವತಿಯ ಮೇಲಿನ ಕ್ರೋಧದಿಂದ ಸ್ವಲ್ಪ, ಈ ಚಳಿಗಾಲದಲ್ಲಿ ಹಣ ವೆಚ್ಚಮಾಡಿಕೊಂಡು ಗಯೆಗೆ ಹೋಗಬೇಕಾಗಿ ಬಂತಲ್ಲ ಎಂಬ ಚಿಂತೆಯಿಂದ ಸ್ವಲ್ಪ.

"ಮನಸಿನೊಳಗೆ ವಾಸನೆ ಇಟ್ಟುಕೊಂಡು ಸತ್ತಿದ್ದಾನೆ, ಅದೂ ಅಪ-ಘಾತದಲ್ಲ. ಇವರಿಂದ ಬಿಡುಗಡೆಯುಂಟೆ? ಭೂತವಾಗಿ ಹುಟ್ಟಿ ಅಲೆಯುವುದೇ ಸೈ," ಎಂದು ಕೆಮ್ಮುತ್ತ ವಿಶುಕಾಕಾ ನುಡಿದ.

ಕಾಕಾ ಹೇಳಿದ ಈ ಕಾರ್ಯಕಾರಣ ಸಂಬಂಧದ ಬಗ್ಗೆ ಯಾರಿಗೂ ಸಂದೇಹವುಂಟಾಗಲಿಲ್ಲ. ಸಮಸ್ತ ತಾರಾಪುರಗ್ರಾಮವು ಪುನಃ ಚೇತರಿಸಿಕೊಂಡು ಚಟುವಟಿಕೆಯುಳ್ಳದಾಯಿತು. ಜನರ ತರ್ಕ-ವಿತರ್ಕ-ಕುತರ್ಕಗಳಿಗೆ ಕಾಲು ಬಂದವು. ವಂಶಲೋಚನರೊಬ್ಬರಿಗೆ ಮಾತ್ರ ಹೊಸದೊಂದು

ವೇದನೆಯನ್ನು ಒಂದು ತಿಂಗಳು ಕೂಡ ಹೃದಯದಲ್ಲಿಟ್ಟುಕೊಂಡಿರಬಾರದೆ? ತನ್ನಲ್ಲಿ ಅವಳಿಗಿದ್ದ ಪ್ರೇಮ ಇಷ್ಟು ಅಲ್ಪವೆ? ಅವಳನ್ನು ಪಡೆಯುವುದಕ್ಕಾಗಿ ತಾನು ಲೋಕನಿಂದೆಯನ್ನು ಹೊತ್ತುದಕ್ಕೆ ಈ ಪುರಸ್ಕಾರವೆ?.... ಸರಿ, ದೇವರು ಮಾಡಿದ್ದು ಒಳ್ಳೆಯದಕ್ಕೇ ಮಾಡಿದ. ನಾನು ಗಾಯಗೊಂಡು ಬಿದ್ದಿದ್ದೆನೆಂದೇ ಹೈಮವತಿಯ ಚರಿತ್ರೆಯನ್ನು ತಿಳಿಯುವುದಕ್ಕೆ ಪ್ರಯೋಗವೊದಗಿತು.

ಒಂದಕ್ಕೆ ತೀರ ಸಾಮಾನ್ಯವಾಗಿ ಅರ್ಥಹೀನವಾಗಿ ಕಾಣುತ್ತಿದ್ದ ವಿಷಯಗಳೇ—ಗೋವರ್ಧನನು ಮೈಯೆಲುವು ಮುರಿದುಕೊಂಡು ಅವಳನ್ನು ಉಳಿಸಿದುದು, ಅವಳು ಒಳ್ಳೆಯ ಜತನದಿಂದ ಅವನ ಆರೈಕೆ ಮಾಡುತ್ತಿದ್ದುದು, ಭಿತ್ತಿಚಿತ್ರದಲ್ಲಿ ಗೋವರ್ಧನನು ಪಾರ್ವತಿಯಲ್ಲಿ ಹೈಮವತಿಯನ್ನು ಮೂಡಿಸಿದುದು, ಹೈಮವತಿ ಅವನ ಮಗಳಿಗೆ ತಾಯಿಯಾಗಿದ್ದುದು ಇತ್ಯಾದಿ—ಇಂದು ವಿಚಾರ ಮಾಡಿಮಾಡಿದಂತೆ ತರಲನಿಗೆ ವಿಪರೀತವಾಗಿ ತೋರತೊಡಗಿದವು. ವೇದನೆಯಿಂದ, ಹಿಂಸೆಯಿಂದ, ಕ್ರೋಧದಿಂದ ಅವನ ಎದೆ ಬಿರಿಯುವಂತಾಯಿತು. ಅವನಿಗೆ ಅವಳನ್ನು ಮರೆಯುವುದೂ ಅಸಾಧ್ಯವಾಯಿತು, ಕ್ಷಮಿಸುವುದೂ ಅಸಾಧ್ಯವಾಯಿತು.

## ೨೧

ಗೋವರ್ಧನನ ಅಷ್ಟೊಂದು ತ್ಯಾಗ ಆದರಗಳೂ ಹೈಮವತಿಯ ನೆನಪಿನಿಂದ ತರಲನನ್ನು ತೊಲಗಿಸಲು ಸಮರ್ಥವಾಗಲಿಲ್ಲ.

ಮದುವೆಯಾದ ಬಳಿಕ ಇಂದು ಮೊದಲ ಏಕಾದಶಿ. ಅವಳ ಮನಸು ಪ್ರಬಲ ದ್ವಂದ್ವದಲ್ಲಿ ಮಥಿತವಾಗತೊಡಗಿತು. ಮುಂಚೆ ಬಾಲ್ಯದಲ್ಲಿ ಅವಳು ಏಕಾದಶಿ ಮಾಡುತ್ತಿದ್ದಳು, ತಾನರಿಯದ ಸತ್ತ ಗಂಡನ ನೆನಪಿಗಾಗಿ ಸನ್ಮಾನಕ್ಕಾಗಿ ಅಲ್ಲ, ಜನನಿಂದೆಯ ಭಯಕ್ಕೆ. ಬಳಿಕ ಗಾಂಧರ್ವವಿವಾಹದಿಂದ ತರಲನನ್ನು ಪತಿಯಾಗಿ ಸ್ವೀಕರಿಸಿದ ಅನಂತರ ಏಕಾದಶಿಯ ದಿನ ಉಪವಾಸವನ್ನು ಬಿಟ್ಟಿದ್ದಳು, ಮುತ್ತೈದೆಯರು ಉಪವಾಸ ಮಾಡುವುದು ವಾಗತ್ರವೆಂದು. ಆದರೆ ಅವಳ ಮುತ್ತೈದೆತನ ತನ್ನ ಮಟ್ಟಿಗೇ ಗುಟ್ಟಾಗಿದ್ದ ವಿಷಯ; ಜನರ ದೃಷ್ಟಿಯಲ್ಲಿ ಅವಳು ವಿಧವೆ. ಆದುದರಿಂದ ಬಹಿರಂಗದಲ್ಲಿ ಉಪವಾಸವಿದ್ದಂತೆ ಇದ್ದು, ಒಳಗೆ ಒಂದು ತುತ್ತು ದೇವಿಯ ಪ್ರಸಾದವನ್ನು ಸೇವಿಸುತ್ತಿದ್ದಳು.

ತರಲನು ತೀರಿಕೊಂಡನೆಂದು ನಿಶ್ಚಿತವಾದ ಬಳಿಕ ಪುನಃ ಅವನ ಸ್ಮೃತಿ-ಗೌರವಕ್ಕಾಗಿ ಪಿಶ್ಚಕ್ರ ನಿರಾಹಾರ ಮಾಡತೊಡಗಿದ್ದಳು. ಈಗ ಪುನಃ ಹೈಮವತಿ ಗೋವರ್ಧನನೊಡನೆ ಮದುವೆಯಾಗಿದ್ದಾಳೆ; ಜನರ ದೃಷ್ಟಿಯಲ್ಲಿ ಸಧವೆ, ತನ್ನ ದೃಷ್ಟಿಯಲ್ಲಿ ವಾಸ್ತವವಾಗಿ ವಿಧವೆ. ಈಗೇನು ಮಾಡುವುದು? ಹೃದಯೇಶ್ವರನಾದ ತರಲನ ಸ್ಮೃತಿ ಸನ್ಮಾನಾರ್ಥವಾಗಿ ಉಪೋಷಣೆ ಮಾಡಬೇಕು; ಅದರಿಂದ ಈಗ ಪತಿರೂಪದಲ್ಲಿರುವ ಗೋವರ್ಧನನಿಗೆ ಅಮಂಗಲವಾದೀತು! ಇವನ ಮಂಗಲಕ್ಕಾಗಿ ಉಣ್ಣಬೇಕೋ? ಅದರಿಂದ ತರಲನ ವಿಷಯದಲ್ಲಿ ಅಶ್ರದ್ಧೆ ಪಟ್ಟಂತಾಗುವುದಿಲ್ಲವೆ? ಕೊನೆಗೆ ಹಿಂದಿನಂತೆ ಒಂದು ತುತ್ತು ಪ್ರಸಾದವನ್ನು ಸ್ವೀಕರಿಸಿ ಉಪವಾಸ ಮುರಿಯುವುದೆಂದು ತೀರ್ಮಾನಿಸಿದಳು—ಅಲ್ಪಾಂಶದಿಂದ ಗೋವರ್ಧನನನ್ನು, ಬಹ್ವಂಶದಿಂದ ತರಲನನ್ನು ಪತಿಯೆಂದು ಸನ್ಮಾನಿಸಿದಂತೆ.

ಇಂತಹದೇ ಇನ್ನೊಂದು ಜಟಿಲಸಮಸ್ಯೆ ವೇಷದ್ದು. ಹೈಮವತಿ ಸಧವೆಯ ವೇಷ ಧರಿಸಬೇಕೇ, ಏನು ವಿಧವೆಯ ವೇಷ ಧರಿಸಬೇಕೆ? ಸಧವೆಯ ವೇಷದಿಂದ ತರಲನಿಗೆ ಅಮರ್ಯಾದೆ, ವಿಧವೆಯ ವೇಷದಿಂದ ಗೋವರ್ಧನನಿಗೆ ಅಮಂಗಲ; ಜನರೆದುರು ಲಜ್ಜಾರಕ್ಷಣೆ ಮಾಡಿಕೊಳ್ಳುವುದಕ್ಕೂ ಸಧವಾವೇಷ ಅಗತ್ಯ. ಇದರಲ್ಲಿಯೂ ಅವಳೊಂದು ನಡುವಿನ ಹಾದಿಯನ್ನು ಹುಡುಕಿದಳು. ಗೋವರ್ಧನನು ಹೆಸರಿಗೆ ಪತಿ, ಹೆಸರಿಗೆ ಮಾತ್ರ ಸಧವಾ ವೇಷ; ತರಲನು ಸ್ವಯಂವರ ಪತಿ, ಅವನಿಗಾಗಿ ಮಿಕ್ಕೆಲ್ಲ ಸೌಭಾಗ್ಯದ ಆಡಂಬರಗಳ ತ್ಯಾಗ. ಅಗಲಂಚಿನ ಸೀರೆಯ ಬದಲು ಗೀರಂಚಿನ ಸೀರೆ ಉಟ್ಟು, ಸೀರಾದ ಒಂದೊಂದು ಬಳೆಯನ್ನು ತೊಟ್ಟು, ಸಾಧವ್ಯವನ್ನು ಕಾಪಾಡುವುದು, ಮಿಕ್ಕೆಲ್ಲ ವೇಷಭೂಷಣಗಳನ್ನು ತೊರೆದು ವೈಧವ್ಯವನ್ನು ಪಾಲಿಸುವುದು.

ಗೋವರ್ಧನನು ಹೈಮವತಿಗೆ ತಂದುಕೊಟ್ಟುವೆಲ್ಲಾ ಅಗಲಂಚಿನ ಸೀರೆಗಳು. ಇಷ್ಟೆಲ್ಲ ಬಟ್ಟೆಗಳು ಮನೆಯೊಳಗೆ ಒಟ್ಟಿರಲಿಕ್ಕೇ ಮತ್ತೆ ಬೇರೆ ತನ್ನಿರೆಂದು ಅವರನ್ನು ಪೀಡಿಸುವುದೆ? ಗೀರಂಚಿನ ಸೀರೆಗಳನ್ನು ತರಲು ಹೇಳುವುದೆ? ಅದೂ ತನ್ನ ಪೂರ್ವಸಂಬಂಧದ—ತರಲನ ಸಂಬಂಧದ—ಸತೀತ್ವದ ವ್ರತಕ್ಕಾಗಿ! ತಂದೆ ಕಳಿಸಿದ ಹಣವಿದೆ, ಕೊಟ್ಟು ತಾನೇ ತರಿಸಿದರೆ? ಗೋವರ್ಧನನು ತನಗೋಸುಗ ಮನಃಪೂರ್ವಕವಾಗಿ ಇಷ್ಟೊಂದು ಧಾರಾಳವಾಗಿ ಏನೆಲ್ಲ

ಮಾಡುತ್ತಿರಲಿಕ್ಕಾಗಿಯೂ ತಾನು ಹೀಗೆ ಮಾಡಿದರೆ ಅವನಿಗೆ ಅಪಮಾನವೆನಿ-ಸದೆ? ಅವನ ಎದೆ ನೋಯದೆ? ಹಣ ಯಾರದೇ ಆಗಲಿ, ದಾಸಿಯ ಮೂಲಕ—ಮದುವೆಯಾದ ಬಳಿಕ ಗೋವರ್ಧನನು ಒಬ್ಬ ದಾಸಿಯನ್ನು ನಿಯಮಿಸಿ ಕೊಂಡಿದ್ದ—ಸೀರೆಯನ್ನು ತರಿಸಿಕೊಳ್ಳುವುದಕ್ಕೆ ಹೈಮವತಿಯ ಮನಸು ಒಪ್ಪ ಲಿಲ್ಲ. ಅವಳು ಇಡೀ ಮಧ್ಯಾಹ್ನವೆಲ್ಲಾ ಕುಳಿತುಕೊಂಡು, ಇದ್ದ ಸೀರೆಯ ಅಗಲಂಚನ್ನು ಹರಿದು, ಅದರ ತುದಿಯಂಚನ್ನು ಮಾತ್ರ ಸೀಳಿಕೊಂಡು, ಮತ್ತೆ ಸೀರೆಗೆ ಹಚ್ಚಿ ಹೊಲಿದಳು.

ತಾನು ಕದ್ದು ಮಾಡಿದುದು ಗೋವರ್ಧನನ ಲಕ್ಷ್ಯಕ್ಕೆ ಬರಲಿಕ್ಕಿಲ್ಲವೆಂದು ಹೈಮವತಿ ಬಗೆದಿದ್ದಳು. ಆದರೆ ಶಾಲೆಯಿಂದ ಬಂದೊಡನೆಯೇ ಅವಳ ಸೀರೆಯ ಅಂಚು ಸೊರಗಿ ಸಣ್ಣಾಗಿರುವುದನ್ನು ಅವನ ಕಣ್ಣು ಕಂಡೇಕಂಡಿತು. ಅವನ ಕಣ್ಣೊಂಬೆಯಾಗಿದ್ದಳವಳು; ಅವಳ ಒಂದೊಂದು ಚಲನವಲನವನ್ನೂ ಅವನು ಮುಗ್ಧನಯನಗಳಿಂದ ನೋಡಿ ಸೊಗಬಡುತ್ತಿದ್ದ; ಅವಳ ಒಂದೊಂದು ಅಂಗರೇಖೆಯೂ ಅವನ ಅಂತರ್ಯದಲ್ಲಿ ಸೌಂದರ್ಯತರಂಗಗಳ-ನ್ನೆಬ್ಬಿಸುತ್ತಿತ್ತು. ಅವಳ ಇಂದಿನ ಹೊಸ ಮಾರ್ಪಾಟೂ ಅವನ ಹೃದಯ ದಲ್ಲಿ ಹೊಸ ಚೆಲುವಿನ ಕಾಮನಬಿಲ್ಲನ್ನು ಮೂಡಿಸಿತು. ತರಲನ ಕಡೆಗಿರುವ ಅವಳ ಎದೆಯೊಲವನ್ನು ಕಂಡು ಅವನಿಗಾದ ಆನಂದಕ್ಕೆ ಪಾರವಿಲ್ಲ. ಈ ವರ್ತನೆಯಿಂದ ಹೈಮವತಿಯ ಚರಿತ್ರೆ ಸುಂದರತರವಾಗಿ ಉಜ್ವಲತರವಾಗಿ ಅವಳು ಮಹಿಮಾನ್ವಿತೆಯಾದಳು. ಸದಾ ಪ್ರಪುಲ್ಲವಾಗಿರುತ್ತಿದ್ದ ಗೋವರ್ಧನನ ಮುಖದಲ್ಲಿ ತಿಳಿನಗೆ ನಲಿದಾಡಿತು. ಅವನು ಸ್ನಿಗ್ಧನಯನಗಳ ಮುಗ್ಧದೃಷ್ಟಿ ಗಳಿಂದ ಹೈಮವತಿಗೆ ಆರತಿ ಬೆಳಗಿದ.

ತನ್ನನ್ನು ಕಂಡಾಗಳೆಲ್ಲ ಗೋವರ್ಧನನ ಮುಖದಲ್ಲಿ ತೃಪ್ತಿಯ ಹಾಸ ಆಡುತ್ತಿದ್ದುದರಿಂದ, ಇಂದಿನ ಅವನ ಆನಂದದಲ್ಲಿ ಹೈಮವತಿಗೆ ವಿಶೇಷವೇನೂ ಕಾಣಲಿಲ್ಲ. ಸೀರೆಯ ಅಂಚು ಅವನಿಗೆ ಗೋಚರಿಸಲಿಲ್ಲವೆಂದು ಅವಳು ಭಾವಿಸಿ ದಳು. ಆ ಬಗ್ಗೆ ಸದ್ಯದಲ್ಲಿಯೆ ಕೈಫಿಯತ್ ಕೊಡಬೇಕಾಗಲಿಲ್ಲವೆಂದು ಅವಳ ಮನಸಿಗೆ ಸಮಾಧಾನ.

ಮರುದಿನ ಗೋವರ್ಧನನು ಕಲಾಶಾಲೆಗೆ ಹೋದ ತರುವಾಯ, ಮಿಕ್ಕ ಸೀರೆಗಳ ಅಂಚುಗಳನ್ನೂ ಹರಿದು ಹಚ್ಚಬೇಕೆಂದು ನೋಡಿದಳು ಹೈಮವತಿ.

ಅಗಲಂಚಿನ ಸೀರೆ ಒಂದೂ ಇರಲಿಲ್ಲ; ಆ ಸ್ಥಳದಲ್ಲಿ ಗೀರಂಚಿನ ಸೀರೆಗಳು! ತನ್ನ ಮನೋರಂಜನೆಗಾಗಿ ಇಚ್ಛಾತೃಪ್ತಿಗಾಗಿ ಗೋವರ್ಧನನ ತತ್ಪರತೆ ಎಷ್ಟು! ಅವಳ ಮನಸು ಮಮತೆ ಕೃತಜ್ಞತೆಗಳಿಂದ ಉತ್ಫುಲ್ಲವಾಯಿತು; ಕಣ್ಣುಗಳಲ್ಲಿ ನೀರೂರಿತು.

ಗೋವರ್ಧನನು ಶಾಲೆಯಿಂದ ಬರುತ್ತಿರುವಾಗ ಬೀದಿಯಿಂದಲೇ ನೋಡಿದ—ಕಿಡಿಕಿಯಲ್ಲಿ ನಿಂತು ಹೈಮವತಿ ಕಣ್ಣೊರಸಿಕೊಳ್ಳುತ್ತಿದ್ದವಳು ತನ್ನನ್ನು ಕಂಡಾಕ್ಷಣ ಅಲ್ಲಿಂದ ಸರಿದುಹೋದಳು. ನನ್ನ ಪ್ರಾಣವನ್ನಿತ್ತು ತರಲನನ್ನು ಬದುಕಿಸಿ ತರುವುದು ಸಾಧ್ಯವಿದ್ದರೆ, ಹೈಮವತಿಗೆ ಮುಂಚಿನ ಸುಖ-ಸಂತೋಷಗಳನ್ನುಂಟುಮಾಡುವುದಕ್ಕಾಗಿ ಆನಂದದಿಂದ ಸಾಯುತ್ತಿದ್ದೆ ಎಂದು ಅವನಿಗೆನಿಸಿತು. ಅವಳ ದುಃಖವನ್ನು ಕಂಡರೆ ಅವನಿಗೆ ವೇದನೆಯಾಗುತ್ತಿತ್ತು; ಅದನ್ನವನು ಅವಳಿಗೆ ತೋರಗೊಡುತ್ತಿರಲಿಲ್ಲ. ತನ್ನ ಆನಂದವು ಅವಳ ಮನಮೊಗಗಳಲ್ಲಿ ಪಡಿಮೂಡಬೇಕೆಂಬುದು ಅವನ ಮನೀಷೆ.

ಈಚೆಗೆ ದಿನಾಲು ಸಂಜೆ-ಮುಂಜಾವುಗಳಲ್ಲಿ ಗೋವರ್ಧನನು ಹೈಮವತಿಗೆ ಚಿತ್ರಕಲೆಯನ್ನು ಕಲಿಸಲಾರಂಭಿಸಿದ್ದ. ಅವಳ ಮನೆಗೆಲಸಗಳ ಜೊಂಜಾಟವನ್ನು ಕಡಿಮೆಮಾಡಿ ಸಮಯವನ್ನು ಉಳಿಸುವುದಕ್ಕಾಗಿ ಒಬ್ಬ ಅಡಿಗೆಯವಳನ್ನಿಟ್ಟುಕೊಂಡ. ಹೈಮವತಿ ವೆಚ್ಚ ಹೆಚ್ಚಾಗುವುದೆಂದು ಬೇಡವೆಂದುದಕ್ಕೆ ಅವನು, "ನಾನು ಮುದುಕನಾದೆ ಹಠಾತ್ ಸತ್ತುಹೋದರೆ ಅನ್ನಪೂರ್ಣೆಯನ್ನು ನೋಡುವರು ಯಾರು? ಅವಳ ಮದುವೆಯೂ ಬೇಗ ಆಗಲಾರದು. ಅವಳ ಲಾಲನೆ ಪಾಲನೆಗೆ ಹಣ ಬೇಡವೆ? ಈಗ ನಾವಿಬ್ಬರೂ ಗಳಿಸುತ್ತಿದ್ದರೆ ಕೈಯೊಳಗೆ ದುಡ್ಡು ಆದೀತು. ನಿನ್ನ ಒಂದು ಚಿತ್ರವನ್ನು ಮಾರಿದರೆ ಅಡಿಗೆಯವಳ ತಲಬಿನ ಐದು ಪಟ್ಟು ಹಣ ಸಿಕ್ಕುವುದು" ಎಂದು ಸಮಾಧಾನ ಹೇಳಿದ್ದ. ಗೋವರ್ಧನನು ಸತ್ತುಹೋದರೆ ತಾನು, ಅನು ಮತ್ತು ಬರಲಿರುವ ಸಂತಾನ ನಿರಾಶ್ರಿತರಾಗುವರೆಂದಲ್ಲ, ಅವನಿರುವಷ್ಟು ದಿನ ಅವನಿಗೆ ನೆರವಾದಂತಾಗುವುದೆಂದು, ಅವನ ಭಾರ ಹಗುರಾಗುವುದೆಂದು ಹೈಮವತಿ ನೀರವವಾಗಿ ಒಪ್ಪಿದಳು.

ಅಡಿಗೆಯವಳನ್ನಿಡುವುದಕ್ಕೆ ಆದಾಯವನ್ನು ಹೆಚ್ಚಿಸುವುದು ಪ್ರಕಟವಾದ ಕಾರಣ. ಗೋವರ್ಧನನ ಒಳನೆಪ ಇನ್ನೊಂದು—ಹೈಮವತಿಯ

ಅಡಿಗೆಯ ದಾವತಿಯನ್ನು ತಪ್ಪಿಸುವುದು. ತಂದೆಯ ಮನೆಯಲ್ಲಿ ಎರಡೂ ಹೊತ್ತೂ ಅಡಿಗೆ ಅವಳದೇ ನಿಜ. ಆದರಿಲ್ಲಿ ಅದನ್ನು ಮಾಡುತ್ತಿದ್ದರೆ, ತಾನು ಗೋವರ್ಧನನ ಮನೆಯ ಅಡಿಗೆಯಾಳು ಮಾತ್ರ ಎಂದು ಅವಳಿಗೆಂದಾದರೂ ಎನಿಸಿಬಿಟ್ಟರೆ ಇಬ್ಬರಿಗೂ ಮನಸ್ತಾಪಕರ. ಪ್ರೀತಿಯ ಆಕರ್ಷಣೆಯಿಂದ ಸ್ವೇಚ್ಛೆಯಾಗಿ ಹೆರವರ ಹೀನಕಾರ್ಯಗಳನ್ನು ಮಾಡುವುದರಲ್ಲಿಯೂ ಗೌರವ ಆನಂದಗಳಿರುತ್ತವೆ; ಆದರೆ ಗತ್ಯಂತರವಿಲ್ಲದೆ ಹೆರವರಿಗಾಗಿ ಉಚ್ಚಕಾರ್ಯಗಳನ್ನು ಮಾಡಿದರೂ ಅಪಮಾನದ ವೇದನೆ ಮನವನ್ನು ತಿನ್ನುವುದು. ಮೊದಲೇ ನಾನಾ ಅಪಮಾನಗಳಿಗೀಡಾಗಿದ್ದವಳು ಹೈಮವತಿ, ಈಗ ಕ್ಷುದ್ರ ಅಪಮಾನವೂ ಆವಳ ಮನಸಿಗೆ ಹತ್ತೀತು ಎಂದು ಗೋವರ್ಧನನು ಎಲ್ಲ ಬಗೆಯಿಂದಲೂ ಎಚ್ಚರುಪಡುತ್ತಿದ್ದ. ಅವಳು ಚಿತ್ರಕಲೆಯನ್ನು ಕಲಿತು, ಅವಳ ಚಿತ್ರಗಳು ಮಾರತೊಡಗಿದಾಗ, ತನ್ನ ಹೊಟ್ಟೆ ಬಟ್ಟೆ ತನ್ನ ದುಡಿಮೆಯಿಂದಲೇ ಸಾಗಿದೆಯೆಂದು ತಿಳಿದುಕೊಂಡರೆ, ಅವಳ ಮನಸಿನ ಸಂಕೋಚಭಾರ ಎಷ್ಟೋ ಕಡಿಮೆಯಾಗುವುದೆಂದು ಅವನೆಣಿಕೆ. ಆ ಮೇಲೆ ಒಂದಾನೊಂದು ದಿನ, ಗೋವರ್ಧನನಲ್ಲಿ ಹೈಮವತಿಗೆ ಅಂತರಂಗಿಕ ಪ್ರೇಮ ಉಂಟಾದರೆ, ಅವನ ದಾನವನ್ನು ಸ್ವೀಕರಿಸಿ ಅವನ ಸಂಸಾರದಲ್ಲಿರುವುದಕ್ಕೆ ಯಾವ ಸಂಕೋಚವೂ ಉಳಿಯಲಾರದು.

ಬಿಡುವಿನಲ್ಲಿ ಹೊಲಮನೆಗಳ ವ್ಯವಸ್ಥೆ ಮಾಡಿ ಬರುವೆನೆಂದು ಹೇಳಿ ಊರಿಗೆ ಹೋಗಿ, ಮನೆ-ಮಾರು ಹೊಲ-ಗದ್ದೆ ತೋಟ-ಪಟ್ಟಿ ಎಲ್ಲವನ್ನೂ ಮಾರಿಬಂದು ಗೋವರ್ಧನನು ಸಾಲವನ್ನು ಹರಿದಿದ್ದ. ಉಳಿದ ಸುಮಾರು ಆರುನೂರು ರೂಪಾಯಿಗಳನ್ನೂ ತನ್ನ ಹೆಂಡತಿಯ ಕೆಲವು ಆಭರಣಗಳನ್ನೂ ಕೆಲವು ಪಾತ್ರೆಗಳನ್ನೂ ಹೈಮವತಿಗೆ ತಂದೊಪ್ಪಿಸಿದ್ದ. ತನಗಾಗಿ ಅವನು ಎಷ್ಟು ನಷ್ಟವನ್ನನುಭವಿಸಿದನೆಂಬುದು ಅವಳಿಗೆ ಗೊತ್ತಾಗಲಿಲ್ಲ. ಅವಳು ಅವನಿಗೆ ಏನನ್ನೂ ಕೊಟ್ಟಿಲ್ಲ, ಕೊಡುವುದಿಲ್ಲ. ತರಲನಿಗಾಗಿ ಕಣ್ಣೀರು ಹರಿಯುವುದು ನಿಂತಿಲ್ಲ, ಅವಳ ಮುಖದಲ್ಲಿಯ ಹಾಸ್ಯ ಮಳೆಗಾಲದ ದಿನಾಂತ್ಯದ ಬಿಸಿಲಿನಂತೆ ಒಂದೊಂದು ಕ್ಷಣ ಕಾಣಿಸಿ ಕತ್ತಲೆಯಲ್ಲಿ ಬೆರೆದುಹೋಗುತ್ತಿದೆ. ಈ ಹೈಮವತಿಯ ಸಲುವಾಗಿ ಗೋವರ್ಧನನು ಪಿತ್ರಾರ್ಜಿತವಾದ ತಾಯಿಯಂತಹ ಮನೆ, ಬಂಗಾರವನ್ನೇ ಬೆಳೆಯುವ ಹೊಲ, ಪ್ರೇಯಸಿಯ ಸಜಲ ನಯನದಂತಹ

ಪುಷ್ಕರಿಣಿ, ಬಂಧುವಿನ ಪುಲಕಿತಗಾತ್ರದಂತಹ ತೋಟ ಎಲ್ಲವನ್ನೂ ಕಳೆದಿದ್ದಾನೆ ತನ್ನದೆಂಬುದೆಲ್ಲವನ್ನೂ ಕಳೆದುಕೊಂಡುದಕ್ಕೆ ಅವನಿಗೊಮ್ಮೊಮ್ಮೆ ದುಃಖವೆನಿಸುವುದು. ಆದರೆ ಆ ದುಃಖ ಅವನು ತಾನಾಗಿ ಬರಮಾಡಿಕೊಂಡುದು, ತನ್ನ ಪ್ರೀತಿಪಾತ್ರಳಿಗಾಗಿ. ಇದರಲ್ಲಿಯೇ ಅವನಿಗೆ ತೃಪ್ತಿ. ಹೈಮವತಿಯನ್ನು ಪ್ರೀತಿಸುವುದು ಸಾಧ್ಯವಾಗಿದೆ, ಪ್ರೀತಿಪಾತ್ರಳ ಸಾನ್ನಿಧ್ಯವನ್ನು ಹೊಂದಿದ್ದಾನೆ; ಇದೇ ಅವನಿಗೆ ಪರಮಸೌಭಾಗ್ಯ. ಇನ್ನೇನು ಬೇಕವನಿಗೆ?

ಮನೆಯೊಳಗೆ ಬಂದು ಪುಲಕಿತ ಕಂಠಸ್ವರದಿಂದ ಅವನೆಂದ: "ಎಲ್ಲಿದ್ದೀ ಶಿಷ್ಯೆ? ಗುರುಮಹಾಶಯ ಬಂದಿದ್ದಾನೆ. ಆದರೆ ಇನ್ನು ಏಳೆಂಟು ದಿನ ವಿರಾಮ ನಿನಗೆ; ನಾನೊಂದು ಚಿತ್ರವನ್ನು ಬೇಗನೆ ಮುಗಿಸಬೇಕಾಗಿದೆ."

ದಿನಾಲು ಸಂಜೆ-ಮುಂಜಾನೆ ಕೋಣೆಯೊಳಗೆ ಬಾಗಿಲಿಕ್ಕಿಕೊಂಡು ಕುಳಿತು ಗೋವರ್ಧನನು ಚಿತ್ರವನ್ನು ಪೂರ್ತಿಗೊಳಿಸಿದ. ಒಂದು ದಿನ ಶಾಲೆಗೆ ಹೋಗುವಾಗ ಅದನ್ನೊಯ್ದು ಹೈಮವತಿಯ ಕೋಣೆಯಲ್ಲಿ ಪೆಟ್ಟಿಗೆಯ ಮೇಲೆ ಗೋಡೆಗೆ ಆನಿಸಿ ನಿಲ್ಲಿಸಿ ಹೊರಟುಹೋದ.

ಊಟವಾದ ಬಳಿಕ ಹೈಮವತಿ ಹೋಗಿ ನೋಡಿ ಸ್ತಂಭಿತೆಯಾಗಿ ನಿಂತಳು. ಮುಖಚರ್ಯೆ ತರಲನದು! ಅವಳು ಧಾವಿಸಿ ಹೋಗಿ ಎರಡು ಕೈಗಳಿಂದಲೂ ಅದನ್ನೆತ್ತಿಕೊಂಡು ಕಣ್ದಣಿಯೆ ನೋಡಿ ಮುತ್ತುಗಳ ಮಳೆಗರೆದಳು. ಚಿತ್ರವನ್ನು ಬಿಗಿದಪ್ಪಿದಳು. ಬಳಿಕ ಮುಂದುಗಡೆ ಹಿಡಿದುಕೊಂಡು ಮುಗ್ಧನೇತ್ರಗಳಿಂದ ಎವೆಯಿಕ್ಕದೆ ನೋಡತೊಡಗಿದಳು. ಈ ಚಿತ್ರ ತನ್ನನ್ನು ಸಂತೋಷಗೊಳಿಸುವುದಕ್ಕಾಗಿ ಗೋವರ್ಧನನು ಚಿತ್ರಿಸಿಕೊಟ್ಟ ಕಾಣಿಕೆ ಎಂಬ ಮಾತು ಆಗವಳಿಗೆ ಹೊಳೆಯಿತು. ತನ್ನ ಸುಖ-ಸಮಾಧಾನಗಳ ವಿಷಯದಲ್ಲಿ ಅವನೆಷ್ಟು ಜಾಗೃತನಾಗಿರುವನೆಂಬುದನ್ನು ನೆನೆದು ಹೈಮವತಿಯ ಅಂತರಂಗ ಸರಸವಾಯಿತು; ಎರಡು ಕಣ್ಣುಗಳಲ್ಲಿಯೂ ನೀರು ಸೂಸಿತು; ದೀರ್ಘನಿಃಶ್ವಾಸವೊಂದು ಹೊರಹೊಮ್ಮಿತು. ಈ ಮನುಷ್ಯ ನಿರಂತರವೂ ಮಹಾಮಹಾದಾನಗಳಿಂದ ತನ್ನನ್ನು ಋಣಿಯಾಗಿ ಮಾಡುತ್ತಿದ್ದಾನೆ, ಇದರಲ್ಲಿ ಕೊಂಚವಾದರೂ ಋಣವನ್ನು ತೀರಿಸುವುದು ಹೇಗೆಂಬುದು ಅವಳಿಗೆ ತಿಳಿಯದಾಯಿತು. ಋಣ-

ಭಾರವು ದಿನದಿನಕ್ಕೂ ದುಃಸಹವಾಯಿತು; ಕೃತಜ್ಞತೆಯ ಸೆಳೆತನವೂ ಬಿಗಿತವೂ ಅತ್ಯಂತ ಪ್ರಬಲವಾದಂತೆ ಅವಳಿಗೆನಿಸಿತು.

ಹೈಮವತಿ ಅಲ್ಲಿಯೆ ಕುಳಿತು, ಚಿತ್ರವನ್ನು ತೊಡೆಯ ಮೇಲಿಟ್ಟು ಕೊಂಡು ದಿಟ್ಟಿಸತೊಡಗಿದಳು ಅವಳಲ್ಲಿ ತರಲನ ನೆನವು ಕ್ರಮಶಃ ಕ್ಷೀಣವಾಗಿ ಅಸ್ಪಷ್ಟವಾಗುತ್ತ ಬಂದಿತ್ತು; ಅದಕ್ಕೆ ರೂಪುಕೊಟ್ಟು ಮತ್ತೆ ಸ್ಥಿರಗೊಳಿಸಿದ ಗೋವರ್ಧನ. ತರಲನು ಗೋವರ್ಧನನ ಪ್ರತಿದ್ವಂದ್ವಿ—ಗೋವರ್ಧನನ ಮೇಲಿನ ಹೈಮವತಿಯ ಸ್ನೇಹಪ್ರವಾಹಕ್ಕೆ ಅಡ್ಡಿಯಾದವ ತರಲ, ಗೋವರ್ಧನನ ವಿವಾಹಿತ ಪತ್ನಿಯ ಅಂತಃಸ್ಥಲದಲ್ಲಿ ಸ್ಥಾಪಿತವಾದ ಗುಪ್ತಮೂರ್ತಿತರಲ; ಅಂಥವನನ್ನು ಹೊರಗೆ ತಂದು ಗೋವರ್ಧನನು ತನ್ನ ಮತ್ತು ಹೈಮವತಿಯ ನಡುವೆ ಕೈಯಾರೆ ಸ್ಥಾಪಿಸಿದ. ಹೈಮವತಿ ಕ್ಷುಬ್ಧಳಾದಳು, ಕೃತಜ್ಞತೆಯಿಂದ ಅನುರಕ್ತೆಯೂ ಆದಳು. ಅವಳು ಚಿತ್ರವನ್ನು ನೆಟ್ಟನೋಟದಿಂದ ನೋಡು-ತ್ತಿದ್ದವಳು, ಚಟ್ಟನೆ ಎದ್ದು ಕುಂಚವನ್ನು ತೆಗೆದುಕೊಂಡು ಚಿತ್ರದ ಗದ್ದದ ಎಡದುದಿಯಲ್ಲಿ ಒಂದು ಚುಕ್ಕೆಯನ್ನಿಟ್ಟು, ಗೋವರ್ಧನನ ನೆನಪಿನ ಕೊರತೆಯನ್ನು ಪೂರಯಿಸಿದಳು.

“ಅವ್ವಾ—ಐ ಕಾಕಾ! ಕಾಕಾ ಎಲ್ಲಿದ್ದಾನವ್ವ ಈಗ?” ಕೋಣೆಯೊಳಗೆ ಬರುಬರುತ್ತಲೇ ಅನ್ನಪೂರ್ಣೆ ಉದ್ಗಾರ ತೆಗೆದಳು.

ಗಭೀರಸ್ತಬ್ಧತೆಯ ತಳದಿಂದ ಮಾತನ್ನು ಹೊರಕ್ಕೆ ತೆಗೆದು ಹೈಮವತಿ ಹೇಳಿದಳು: “ಸ್ವರ್ಗದೊಳಗೆ.”

“ನೀನು ಹೋಗಿದ್ದೆಯಲ್ಲ, ಅಲ್ಲಿಗೇ? ಕಾಕಾ ನೆಟ್ಟಗಾಗಿ ಯಾವಾಗ ಬರುತ್ತಾನೆ ಅವ್ವ?”

ಹೈಮವತಿಯ ಕಂಠ ಗದ್ಗದವಾಯಿತು. ಅವಳೆಂದಳು: “ಇನ್ನವರು ಬರುವುದಿಲ್ಲ ಮಗೂ. ದೇವರು ತೆಗೆದುಕೊಂಡು ಹೋಗಿದ್ದಾನೆ. ಒಳ್ಳೇ ವಸ್ತುಗಳ ಮೇಲೆ ದೇವರಿಗೆ ಬಹಳ ಆಶೆ.”

ಹೈಮವತಿಯ ಕೊರಳಿಗೆ ತೆಕ್ಕೆ ಬಿದ್ದು, ಹೆಗಲಮೇಲೆ ಮುಖವಿಟ್ಟು ಅನ್ನಪೂರ್ಣೆ, “ಹಾಗಾದರೆ ನಿನ್ನನ್ನೇಕೆ ತಿರುಗಿ ಕೊಟ್ಟ? ನೀನೂ ಬಹಳ ಒಳ್ಳೆಯವಳು.” ಎಂದು ಕೇಳಿದಳು.

ನಿಡಿದಾಗಿ ಉಸಿರ್ಗರೆದು ಅನ್ನಪೂರ್ಣೆಯ ಮುಖಚುಂಬನದಿಂದ ಕಂಬನಿಗಳನ್ನು ನಿವಾರಿಸಿಕೊಂಡು ಹೈಮವತಿ ಉತ್ತರವಿತ್ತಳು: "ನಿಮ್ಮ ತಂದೆ ಎಷ್ಟು ಒಳ್ಳೆಯವರಿದ್ದಾರೆಂಬುದನ್ನು ತಿಳಿದುಕೊಳ್ಳಲಿಕ್ಕೆ ದೇವರು ನನ್ನನ್ನು ತಿರುಗಿ ಕಳಿಸಿದ."

ಅನ್ನಪೂರ್ಣೆಗೆ ಹಿಗ್ಗಾಯಿತು. "ನಮ್ಮಪ್ಪ ಒಳ್ಳೆಯವ; ನೀನು ಒಳ್ಳೆಯವಳು, ನಾನೂ ಒಳ್ಳೆಯವಳೇನವ್ವ?" ಎಂದಳು.

"ನೀನೂ ಬಹಳ ಒಳ್ಳೆಯವಳು ಮಗೂ," ಎಂದು ಅವಳನ್ನು ಮತ್ತೆ ಮುದ್ದಾಡಿ ಹೈಮವತಿ ನುಡಿದಳು.

"ನನ್ನ ತಮ್ಮ ಹುಟ್ಟುತ್ತಾನಲ್ಲ, ಆತ?"

"ನಿಮ್ಮಿಂದ ಅವನೂ ಒಳ್ಳೆಯವನಾಗುತ್ತಾನೆ."

ಅನ್ನಪೂರ್ಣೆ ವ್ಯಗ್ರಳಾಗಿ ಅಪ್ಪನ ಬೆನ್ನಮೇಲಿಂದೆದ್ದು ಎದುರಿಗೆ ಬಂದು, "ಪಾಪಾ ಯಾವಾಗ ಹುಟ್ಟುವುದವ್ವ? ಇಷ್ಟೇಕೆ ತಡಮಾಡುತ್ತೀ?" ಎಂದು ಪ್ರಶ್ನೆಯನ್ನೊಡ್ಡಿದಳು.

ಹೈಮವತಿ ಚಟ್ಟನೆದ್ದು ಹೊರಟುಹೋಗಿಬಿಟ್ಟಳು.

## ೨೨

ಗೋವರ್ಧನನು ಸಂಜೆಗೆ ಮನೆಗೆ ಮರಳಿದ ಮೇಲೆ ಹೈಮವತಿಯ ಕೋಣೆಗೆ ಹೋಗಲು ಹಿಂಜರಿದ; ನೆಟ್ಟಗೆ ತನ್ನ ಕೋಣೆಗೆ ಹೋಗಿ ಬಣ್ಣ ಕುಂಚ ತೆಗೆದುಕೊಂಡು ಕುಳಿತ. ತಾನು ಅವಳ ಮನಸಿನ ಸಂತೋಷಕ್ಕಾಗಿ ಮಾಡಿದ ಪ್ರಯತ್ನವು ಅವಳನ್ನೊಂದು ವೇಳೆ ಲಜ್ಜಾಹತಳನ್ನಾಗಿ ಮಾಡಿದ್ದರೆ!

ಕೊಂಚ ಹೊತ್ತಿನಲ್ಲಿ ಹೈಮವತಿ ತಿಂಡಿಯನ್ನು ತೆಗೆದುಕೊಂಡು ಅಲ್ಲಿಗೇ ಹೋದಳು. ಗೋವರ್ಧನನು ಅರಳಿದ ಮೊಗದಿಂದ ತಟ್ಟೆಯನ್ನು ಇಸಿದುಕೊಂಡು, ಮಾತನ್ನೇನೂ ಆಡದೆ ಉಪಹಾರದಲ್ಲಿ ತೊಡಗಿದ. ಆದರೂ ಅವಳು ನಿಂತುಕೊಂಡಿರುವುದನ್ನರಿತು ಅವನು ಮುಖವೆತ್ತಿ ನೋಡಿದ. ಅವಳ ಮೊಗದಲ್ಲಿ ಸೊಗಸಿನ ಲಜ್ಜೆ ಮುತ್ತಿನಂತೆ ಬೆಳಗುತ್ತಿತ್ತು; ಅವಳ ಕಣ್ಣುಗಳು ಕೃತಜ್ಞ

ಅನುರಾಗದಿಂದ ಆನತವಾಗಿದ್ದವು. ಸದಾ ಪ್ರಸನ್ನವಾಗಿರುವ ಗೋವರ್ಧನನ ಮನಸು ಹೈಮವತಿಯನ್ನು ಕಂಡರೇ ಪ್ರಫುಲ್ಲವಾಗುವುದು; ಅವಳಲ್ಲಾದ ಈ ಪರಿವರ್ತನದಿಂದಲಂತೂ ಅದು ಮತ್ತಷ್ಟು ಉತ್ಫುಲ್ಲವಾಯಿತು.

" ನಿನ್ನ ಆ ಬೇಟೆಗಾರನ ಚಿತ್ರ ಐವತ್ತು ರೂಪಾಯಿಗೆ ಮಾರಿತು." ಎಂದು ನಗುಮೊಗದಿಂದ ಹೇಳಿ ಗೋವರ್ಧನನು ಜೇಬಿನಿಂದ ನೋಟುಗಳನ್ನು ಹೊರ ತೆಗೆದ.

ಹೈಮವತಿಯ ಮೋರೆಯ ಮೇಲೆ ಆನಂದವು ತೇಲಿ ಬಂದಿತು. ಇದು ಅವಳ ಮೊದಲ ಗಳಿಕೆ. ಈಗ ತಾನು ಸ್ವಲ್ಪವಿಲ್ಲ ಸ್ವಲ್ಪ ಗೋವರ್ಧನನ ದಾವತಿಯನ್ನು ಕಡಿಮೆ ಮಾಡಲು ಸಮರ್ಥಳಾದೆನಲ್ಲ ಎಂದು ಅವಳಿಗೆನಿಸಿತು.

" ಯಾರು ಕೊಂಡರು?" ಮೃದುಮಧುರ ಸ್ವರದಲ್ಲಿ ಆಕೆ ಕೇಳಿದಳು

" ಒಬ್ಬ ಸೆಟ್ಟಿ."

ನಿಜವಾಗಿ, ಸೆಟ್ಟಿ ಆ ಹಣವನ್ನು ಕೊಟ್ಟುದು, ಗೋವರ್ಧನನು ಅವನ ಭಾವಚಿತ್ರವನ್ನು ಎನ್‌ಲಾರ್ಜ್ ಮಾಡಿಕೊಟ್ಟುದಕ್ಕಾಗಿ.

ಹೈಮವತಿ ಹೆಚ್ಚಿನ ಉತ್ಸಾಹದಿಂದ ಬಣ್ಣ ಕುಂಚಗಳನ್ನು ತೆಗೆದುಕೊಂಡು ಚಿತ್ರ ತೆಗೆಯಲು ಗೋವರ್ಧನನ ಪಕ್ಕದಲ್ಲಿ ಕುಳಿತಳು. ಅವಳ ಚಿತ್ರಣವನ್ನು ನಿಂತು ನಿರೀಕ್ಷಿಸುವಾಗಿನ ಅವಳ ಅತಿನಿಕಟ ಸಾನ್ನಿಧ್ಯ, ತಪ್ಪು ತಿದ್ದಲೆಂದು ಅವಳ ಕೈಯ ಕುಂಚವನ್ನು ಇಸಿದುಕೊಳ್ಳುವಾಗಿನ ಅಂಗುಲಿ-ಸ್ಪರ್ಶ, ಚಿತ್ರವನ್ನು ತಿದ್ದುವುದಕ್ಕಾಗಿ ಬಾಗಿದಾಗಿನ ಅವಳ ಉಸಿರಿನ ಸೋಂಕು ಇವೆಲ್ಲ ಗೋವರ್ಧನನಿಗೆ ಉಲ್ಲಾಸವೀಯುತ್ತಿದ್ದವು; ಆದರಿಂದ ಅವನ ಚಿತ್ರಗಳ ಸೊಬಗು ಹೆಚ್ಚುತ್ತಿತ್ತು.

ಸ್ವಲ್ಪ ದಿನಗಳಲ್ಲಿಯೇ ಗೋವರ್ಧನನು ಕುಶಲಚಿತ್ರಕಾರನೆಂದು ಹೆಸರು ಗಳಿಸಿದ. ಅವನ ಚಿತ್ರಗಳಿಗೆ ಈಗ ಚೆನ್ನಾಗಿ ಬೆಲೆ ಬರುತ್ತಿದೆ. ತನ್ನ ಚಿತ್ರದ ಮಾರಾಟವಾಯಿತೆಂದರೆ ಹಣವನ್ನು ತಂದು ಹೈಮವತಿಯ ಕೈಯೊಳಗೆ ಕೊಡುತ್ತಾನೆ; 'ಇದು ಇಬ್ಬರ ಚಿತ್ರಗಳ ಮಾರಾಟದಿಂದ ಬಂದ ಹಣ' ಎಂದು ಲೆಕ್ಕ ಹೇಳುತ್ತಾನೆ. ಒಮ್ಮೊಮ್ಮೆ ತನ್ನ ಚಿತ್ರಕ್ಕಿಂತಲೂ ಅವಳ ಚಿತ್ರಕ್ಕೇ

ಹೆಚ್ಚು ಬೆಲೆ ಸಿಕ್ಕಿತೆಂದು ತಿಳಿಸುತ್ತಾನೆ. ಅದರಿಂದ ಅವಳಿಗಾಗುವ ಉಲ್ಲಾಸ ಉತ್ಸಾಹಗಳನ್ನು ಮನವಾರೆ ನೋಡಿ ಗೋವರ್ಧನನು ತನ್ನ ಸಟೆ ಸಾರ್ಥಕ ವಾಯಿತೆಂದು ಭಾವಿಸುತ್ತಾನೆ.

ಹೀಗೆ ಪತಿ-ಪತ್ನಿಯರ ಹೃದಯಗಳೆರಡು ಕೊಂಚಕೊಂಚವಾಗಿ ಹತ್ತಿರ ವಾಗುತ್ತಲಿದ್ದವು. ತರಲನ ಸ್ಮೃತಿಯೂ ಅವರ ಶಪಥ-ಸಂಕಲ್ಪಗಳೂ ಕೊಂಚಕೊಂಚವಾಗಿ ಮಾಸಿ ಮಾಸಿ ಅಳಿಸತೊಡಗಿದ್ದವು.

ಜ್ಯೇಷ್ಠ. ಕಲಾಶಾಲೆಗೆ ಬಿಡುವು. ಆದರೆ ಗೋವರ್ಧನನು ಯಾರ ಭಾವಚಿತ್ರವನ್ನೋ ಎನ್‌ಲಾರ್ಜ್ ಮಾಡುವುದಿದೆಯೆಂದು ಹೇಳಿ ಹಗಲೆಲ್ಲ ಹೊರಗೇ ಇರುತ್ತಿದ್ದ. ಒಂದು ದಿನ ಸಂಜೆಯ ಮುಂದೆ ತಿರುಗಿ ಬಂದು ಹೈಮವತಿಯ ಕೋಣೆಗೆ ಹೋಗಿ ಅವನೆಂದ: "ಗುರುಮಹಾಶಯಾ, ತಮ್ಮ ಶಿಷ್ಯ ಬಂದಿದ್ದಾನೆ!"

ದುರ್ನಿವಾರ್ಯವಾದ ವೇದನೆಯನ್ನು ಮರೆಮಾಜುವ ಪ್ರಯಾಸದಿಂದ ಹೈಮವತಿಯ ಮುಖ ಮ್ಲಾನವಾಯಿತು. ಆದರೂ ವ್ಯಥಿತ ಲಜ್ಜೆಯೂ ಅಲ್ಲಿ ಮೂಡಿ ಕಠೋರವಮುಖಶ್ರೀಯನ್ನು ಕೋಮಲವಾಗಿ ಮಾಡಿತು. ಆ ನೂತನ ಕಾಂತಿಯನ್ನು ಕಂಡು ಗೋವರ್ಧನನು ವಿಸ್ಮಯಗೊಂಡು ಏನೋ ಮಾತನಾಡ ಬೇಕೆಂದಿದ್ದ. ಹಠಾತ್ ಅನ್ನಪೂರ್ಣೆ ಮಾತನಾಡಿದಳು: "ಅಪ್ಪಾ, ಅವ್ವನ ಹೊಟ್ಟೆ ನೋಯುತ್ತದಂತೆ; ಇಡೀ ದಿನ ಅಳುತ್ತಿದ್ದಳು. ದಾಸಿ ಮತ್ತೆ ಅಡಿಗೇ ಕಕ್ಕಿ ಅನ್ನುತ್ತಿದ್ದರು—ಈಗ ನನಗೆ ತಮ್ಮ ಹುಟ್ಟುತ್ತಾನಂತೆ. ಹೌದೇ ಅಪ್ಪಾ?"

ವೇಗವಾಗಿ ಓಡುವ ತುಂಡುಮೋಡದ ನೆಳಲಿನಂತೆ, ಗೋವರ್ಧನನ ಮುಖದಲ್ಲಿ ಮ್ಲಾನತೆ ಕ್ಷಣ ಮಾತ್ರ ಸುಳಿದುಹೋಯಿತು. ಹೈಮವತಿ ನಾಚಿಕೆ ಯಿಂದ ಮೋರೆ ತಗ್ಗಿಸಿಕೊಂಡು ಕುಳಿತಿದ್ದಳು. ಗೋವರ್ಧನನು ಕೇಳಿದ: "ನರ್ಸನ್ನು ಕರೆಯಲಿಕ್ಕೆ ಹೋಗಬೇಕಲ್ಲವೆ?"

ಹೈಮವತಿ ತಲೆ ಹಾಕಿ 'ಹೋಗಿರಿ' ಎಂದು ಸೂಚಿಸಿದಳು.

ಮನೆಯಿಂದ ಹೊರಬೀಳುತ್ತಲೇ ಗೋವರ್ಧನನ ಮುಖವನ್ನು ಕಾವಳ ಆವರಿಸಿತು—'ಈ ಕೂಸು ತರಲನದು!'

ತರಲನು ಹೈಮವತಿಯಲ್ಲಿ ಸ್ಮೃತಿಮಾತ್ರವಾಗಿ ಉಳಿದಿರುವ ವರೆಗೆ ಗೋವರ್ಧನನಿಗೆ ಅದು ಸಹನೀಯವಾಗಿತ್ತು—ಗೀರಂಚಿನ ಸೀರೆಗಳನ್ನು ತಂದುಕೊಟ್ಟು, ತರಲನ ಚಿತ್ರವನ್ನೂ ಬರೆದುಕೊಟ್ಟು. ಈಗ ತರಲನ ಸ್ಮೃತಿ ಸಜೀವ ಮೂರ್ತಿಯಾಗಿ ನಿಲ್ಲುವುದು! ಅವನ ಮನಸು ವ್ಯಥೆಗೊಂಡಿತು, ಮುಖ ವಿವರ್ಣವಾಯಿತು. ನರ್ಸನ್ನು ಕರೆದು ಗೋವರ್ಧನನು ಮನೆಯೊಳಗೆ ಕಾಲು ಇಡು ಇಡುವುದರೊಳಗೇ ಅನ್ನಪೂರ್ಣೆಯೆಂದಳು: “ಅಪ್ಪಾ ತಮ್ಮನನ್ನು ನಾನು ಎತ್ತಿಕೊಳ್ಳುತ್ತೇನೆ.”

“ಎತ್ತಿಕೊಳ್ಳುವೆಯಂತೆ ಮಗೂ, ಮೊದಲು ತಮ್ಮ ದೊಡ್ಡವನಾಗಲಿ” ಗೋವರ್ಧನನು ನಗುತ್ತ ಹೇಳಿದ.

“ಹೊಟ್ಟೆ ಸರಿಯಲಿಕ್ಕೆ ಹತ್ತಿದ ಮೇಲೇನು?”

“ಹೂಂ.”

“ಈಗ ಹಾಗೇ ನೋಡಲೇನು?”

“ಹೂಂ. ಬಾಣಂತಿ ಕೋಣೆಯಿಂದ ಹೊರಗೆ ತಂದರೆ ನಿಮ್ಮ ತಾಯಿ ಬಯ್ಯುತ್ತಾಳೆ. ನೀನು ಅಲ್ಲಿಯೇ ಕೂತು ತೊಡೆಯ ಮೇಲೆ ಕರೆದುಕೊಂಡು ಸ್ವಲ್ಪ ಸ್ವಲ್ಪ ಆಡಿಸು; ಹೇಗೆ?”

ಅನ್ನಪೂರ್ಣೆ ಆನಂದದಿಂದ ಚಪ್ಪಾಳೆಯಿಕ್ಕಿ ಕುಣಿದಳು. ಆ ಆನಂದ ತಂದೆಗೆ ಸೊಗಸಲಿಲ್ಲ. ಆದರೂ ಅವಳ ಉಲ್ಲಾಸದಲ್ಲಿ ಅವನೂ ಆನಂದ ವನ್ನು ತೋರಿಸಿದ.

“ಅಣ್ಣಾ, ಬಕ್ಷೀಸು ಕೊಡಿರಿ, ಗಂಡು ಹುಟ್ಟಿದೆ” ದಾಸಿ ಮತ್ತು ಅಡಿಗೆ ಯವಳು ಆನಂದದಿಂದ ಕೇಳಿದರು.

ವಿಷಣ್ಣಭಾವವನ್ನು ನಗೆಯೊಳಗೆ ಮರೆಮಾಡಿ ಐದುರೂಪಾಯಿಗಳನ್ನು ತೆಗೆದುಕೊಡುತ್ತ ಗೋವರ್ಧನನು “ಸಂದೇಶ ತಿನ್ನಿರಿ” ಎಂದ.

ದಾಸಿ ಮತ್ತು ಅಡಿಗೆಯವಳು ಅನ್ನಪೂರ್ಣೆಗೆಂದರು: “ಬಾ ತಂಗಣ್ಣಿ, ಬಾ. ತಮ್ಮನನ್ನು ನೋಡು ಬಾ.”

ಅನ್ನಪೂರ್ಣೆ ನಗುತ್ತ ನೆಗೆದಾಡುತ್ತ ಅವರೊಂದಿಗೆ ತೆರಳಿದಳು. ಗೋವ-

ರ್ಧನನ ಮುಖವು ನಗೆಯನ್ನು ಕಳೆದುಕೊಂಡು ಹೆಂಚುಬಡೆದಂತಾಯಿತು. ನವಜಾತ ಶಿಶುವಿನ ವಿಷಯದಲ್ಲಿ ಅವನ ಮನಸು ವಿರೂಪಗೊಂಡಿತು—ಅದು ತರಲನ ಕೂಸು, ಅನಧಿಕಾರದಿಂದ ಗೋವರ್ಧನನ ಮನೆಗೆ ಬಂದಿದೆ; ಗೋವರ್ಧನ ಹೈಮವತಿಯರ ನಡುವೆ ದೊಡ್ಡ ಬಂಡೆಗಲ್ಲು! ತರಲನ ಮಕಾಳವಾದ ಸ್ಮೃತಿ ಸಜೀವ ಮೂರ್ತಿಯಾಗಿ ಹೈಮವತಿಯ ಹೃದಯದ ಗದ್ದುಗೆಯನ್ನೇರಿ ಕುಳಿತಿತು!

ಇದರಿಂದ ಹೈಮವತಿಗೆ ನೆಮ್ಮದಿಯುಂಟಾಗುವುದು, ಅವಳಲ್ಲಿ ಪುನಃ ಮೊದಲಿನ ಪ್ರಸನ್ನತೆ ಮನೆ ಮಾಡುವುದು ಎಂಬುದನ್ನು ನೆನೆದಾಗ ಗೋವರ್ಧನನ ಮನಸು ಪ್ರಫುಲ್ಲವಾಯಿತು ಅವನು ಬಾಣಂತಿ ಕೋಣೆಯ ಬಳಿ ಹೋಗಿ ನಗುಮೊಗದಿಂದ ಕೇಳಿದ: “ ಏನು ಹೈಮವತೀ, ತೊಡೆ ಬೆಳಗುವವನು ಕಾರ್ತಿಕನೋ ಗಣೇಶನೋ?”

ಮಾತೃತ್ವದ ಸುಖ-ಗರ್ವ-ಲಜ್ಜೆಗಳು ಬೆರೆದ ನಗೆಯಿಂದ ಹೈಮವತಿ ನೀರವ ಉತ್ತರವನ್ನಿತ್ತಳು. ಆ ನಗೆಯಿಂದ ಗೋವರ್ಧನನು ಕೃತಾರ್ಥನಾದ.

## ೨೩

ಆರನೆಯ ದಿನ ಷಷ್ಠೀಪೂಜೆ ಮಾಡಬೇಕಾಯಿತು ಗೋವರ್ಧನ, ಮಗುವಿನ ತಂದೆಯೆಂದು. ಆಗವನ ಮನಸು ವಕ್ರಿಸಿಕೊಂಡು ವಿದ್ರೋಹಿಯಾಯಿತು. ಮಗು ತನ್ನದೆಂದೊಪ್ಪಲು ಅದು ಎಷ್ಟು ಪ್ರಯತ್ನಿಸಿದರೂ ಸಿದ್ಧವಾಗಲೊಲ್ಲದು. ಅಡಿಗೆಯವಳು ಪೂಜೆಯ ಸಿದ್ಧತೆ ಮಾಡಿದಳು. ಪುರೋಹಿತನು ಬಂದು ಕಾದುಕೊಂಡು ಕುಳಿತ; ಗೋವರ್ಧನನ ಸುಳಿವೇ ಇಲ್ಲ. ಸಂಜೆಯ ಹೊತ್ತಿಗೆ ಅವನು ಮನೆಗೆ ಬಂದ. ಅನ್ನಪೂರ್ಣೆ ಓಡಿ ಹೋಗಿ ಅವನನ್ನು ಕೈಹಿಡಿದೆಳೆಯುತ್ತ, “ಎಷ್ಟು ಹೊತ್ತಪ್ಪ? ಪಾಪಾನ ಪೂಜೆ ಮಾಡಬೇಕಲ್ಲವೆ? ಪಾಪಾ ದೇವರಾಗುತ್ತದೆ, ಬಾ” ಎಂದಳು.

“ನಡೆ ಮಗೂ ನಡೆ. ಪಾಪಾಗೆ ಹಾರ ತರಲಿಕ್ಕೆ ಹೋಗಿದ್ದೆ, ಅದಕ್ಕೆ ತಡವಾಗಿಬಿಟ್ಟಿತು.” ಎಂದು ಗೋವರ್ಧನನು ಹೇಳಿದ.

ಗೋವರ್ಧನನ ವಿಲಂಬದಿಂದ ಮಗುವಿನ ವಿಷಯದಲ್ಲಿ ಅವನಿಗೆ ಅನಾದರವಿದೆ, ಉಪೇಕ್ಷೆಯಿದೆ ಎಂದು ಹೈಮವತಿಯ ಭಾವನೆಯಾಗಿತ್ತು; ಅವಳನ್ನು ವಿಷಾದವು ಆವರಿಸಿತ್ತು. ಈಗ ತನ್ನ ತಿಳಿವಳಿಕೆ ತಪ್ಪೆಂದಾಗಲು ಅವಳಿಗೆ ನಾಚಿಕೆಯಾಯಿತು. ಅವನು ತಂದ ಸ್ನೇಹದ ಉಡುಗೊರೆಗಳನ್ನು ಕಂಡು ಅವಳ ಚಿತ್ತವು ಪ್ರಸನ್ನವಾಯಿತು.

ಬಾಣಂತಿ ಕೋಣೆಯ ಬಾಗಿಲಲ್ಲಿ ನಿಂತು ಗೋವರ್ಧನನು ನೋಡಿದ. ಹೈಮವತಿ ಹೊಸ ಬಟ್ಟೆಗಳನ್ನು ಧರಿಸಿ, ಮಗುವನ್ನು ತೊಡೆಯ ಮೇಲಿಟ್ಟು ಕೊಂಡು ಒಳಬಾಗಿಲಲ್ಲಿ ಕುಳಿತಿದ್ದಳು. ಅವಳ ಮೊಗದಲ್ಲಿ ಸವಿನಗೆ ಮುಗುಳೊಡೆದಿತ್ತು. ಅದನ್ನು ಕಂಡು ಗೋವರ್ಧನನ ಕೃತಕ ಉಲ್ಲಾಸವು ಸ್ವಾಭಾವಿಕ ಉಲ್ಲಾಸದಲ್ಲಿ ಪರಿಣತವಾಯಿತು. ಆದರೆ ಅದು ಹೆಚ್ಚು ಹೊತ್ತು ನಿಲ್ಲಲಿಲ್ಲ. ಪೂಜೆಯನ್ನು ಮುಗಿಸಿ ಹೊರಡಲು ಬಾಣಂತಿ ಕೋಣೆಯ ಕಡೆ ಬೆನ್ನು ತಿರುವುತ್ತಲೇ ಅವನ ಉಲ್ಲಾಸವೆಲ್ಲ ಪುನಃ ಲಯವಾಗಿ ಮುಖವು ಕಠೋರ ಗಂಭೀರವಾಯಿತು.

ತರಲನದಾದುದರಿಂದ ಮಗುವಿನ ಬಗ್ಗೆ ಉಂಟಾಗಿದ್ದ ತಿರಸ್ಕಾರಭಾವವನ್ನು ತ್ಯಜಿಸುವುದು ಗೋವರ್ಧನನಿಗೆ ಸುತರಾಂ ಸಾಧ್ಯವಿಲ್ಲದಾಯಿತು. ಹೈಮವತಿ ಅನ್ನಪೂರ್ಣೆಯರ ಎದುರಿನಲ್ಲಿ ಆ ಭಾವವು ಎಲ್ಲಿ ಕಾಣಿಸಿಕೊಳ್ಳುವುದೋ ಎಂಬ ಭಯದಿಂದ ಅದನ್ನು ಮಂದಹಾಸದೊಳಗೆ ಅಡಗಿಸಲು ಅವನು ವಿಶ್ವಪ್ರಯತ್ನ ಮಾಡುತ್ತಲಿದ್ದ. ಮಗು ಒಂದೇ ಮಲಗಿರುವುದನ್ನು ಕಂಡಾಗ 'ಶುದ್ಧ ಮಂಗನ ಮರಿ'ಎಂದು ತವನಿಗೆನಿಸುತ್ತಿತ್ತು. ಅದೇ, ಹೈಮವತಿಯ ತೊಡೆಯ ಮೇಲೆ ಪವಡಿಸಿದಾಗ ಅವನು ಹತ್ತಿರ ಹೋಗಿ ಮಂದಹಾಸವನ್ನು ಬೀರುತ್ತ, "ಎಷ್ಟು ಮುದ್ದಾಗಿದೆ ಮಗು! 'ಹೈಮವತಿ'ಯ ಮಗ ಕಾರ್ತಿಕಸ್ವಾಮಿ ತಾನೆ!" ಎಂದು ನುಡಿಯುತ್ತಿದ್ದ. ಆಗ ಅವಳ ಮೊಗದಲ್ಲಿ ನಗೆ ನಲಿದಾಡುವುದು. ಆ ಲಾಸ್ಯವು ಗೋವರ್ಧನನ ಹೃದಯಕ್ಕೆ ಆಪ್ಯಾಯನ.

ಹೈಮವತಿ ಗೋವರ್ಧನನ ವಿವಾಹಿತ ಪತ್ನಿ. ಅವಳನ್ನು ಹೊಂದಿಕೊಂಡು ಕುಳ್ಳಿರಲು ಅವನ ಮನಸು ಹರಿಯುವುದು. ಆದರೂ ಅವಳ ನೆಳಲನ್ನು ಸ್ಪರ್ಶಿಸುವುದೂ ಅಸಾಧ್ಯವಾಗಿತ್ತವನಿಗೆ. ಕಾಳೀಮಾತೆಯ ಸಮ್ಮುಖದಲ್ಲಿ ಮಾಡಿದ ಪ್ರತಿಜ್ಞೆ ಅವರಿಬ್ಬರ ನಡುವೆ ಗೋಡೆಯಾಗಿ ನಿಂತಿರುತ್ತಿತ್ತು.

ಈಗ ಮಗುವಿನ ಮಧ್ಯಸ್ಥಿಕೆಯಿಂದ ಹೈಮವತಿಯ ತೊಡೆಗೆ ತೊಡೆ ಹೊಂದಿಸಿ ಕುಳಿತುಕೊಳ್ಳುವ ಸೌಭಾಗ್ಯವನ್ನು ಗೋವರ್ಧನನು ಪಡೆದಿದ್ದ. ಮಗುವನ್ನು ಮೈದಡವುವಾಗ ಹಲವು ಸಲ ಆವಳ ಅಂಗಸ್ಪರ್ಶದ ಸುಖವನ್ನೂ ಕದಿಯುತ್ತಿದ್ದ. ಸುಖದ ಸೇತುವೆಯಂತಿದ್ದ ಆ ಕೂಸಿನ ವಿಷಯದಲ್ಲಿ ಮಾತ್ರ ಆವನಿಗೆ ಒಳ್ಳೆಯ ಭಾವನೆಯಿರಲಿಲ್ಲ. ಅದಕ್ಕೆ ಒಳ್ಳೆಯ ಬಟ್ಟೆಗಳನ್ನು ತರುವಾಗ ಅಸಹ್ಯವೆನಿಸುತ್ತಿತ್ತು. ಆವರೂ ಹೈಮವತಿ ಹೇಳಿರದಿದ್ದರೂ ಅದಕ್ಕೆ ಅಗತ್ಯವಾದ ವಸ್ತುಗಳನ್ನು ಅವನು ತಾನಾಗಿ ಒದವಿಸುತ್ತಿದ್ದ. ಅದರಿಂದ ಮಗುವಿನಲ್ಲಿ ಅವನಿಗೆ ಪ್ರೀತಿಯಿದೆಯೆಂದು ಅವಳು ಭಾವಿಸುತ್ತಿದ್ದಳು; ಸಾನಂದ ಕೃತಜ್ಞತೆಯ ಜ್ಯೋತಿ ಅವಳ ಮುಖವನ್ನು ಬೆಳಗುತ್ತಿತ್ತು. ಆದನ್ನು ಕಂಡು ತನ್ನ ಅಪವ್ಯಯವು ಸಾರ್ಥಕವಾಯಿತೆಂಬ ಸಂತೃಪ್ತಿ ಗೋವರ್ಧನನಿಗೆ.

ಮೂರು ನಾಲ್ಕು ತಿಂಗಳು ಈ ದ್ವಂದ್ವದಲ್ಲಿ ಕಳೆದವು. ಒಂದು ದಿನ ಗೋವರ್ಧನನು ಹೈಮವತಿಯ ಕೋಣೆಗೆ ಹೋದ. ಕೂಸೊಂದೇ ಇತ್ತು. ಡಬ್ಬ ಹೊರಳಿ ಪುನಃ ಪುನಃ ಹೆಡೆಯೆತ್ತಲು ಹವಣಿಸುತ್ತಿತ್ತು. ತಲೆ ನಿಲ್ಲದೆ ದೊಪ್ಪನೆ ಹಾಸಿಗೆಯ ಮೇಲೆ ಬೀಳುತ್ತಿತ್ತು. ಅದರ ಆ ದುರವಸ್ಥೆಯನ್ನು ಕಣ್ಣಿಂದ ನೋಡಿಯೂ ಗೋವರ್ಧನನು ಸುಮ್ಮನೆ ತಿರುಗಿ ಬರುತ್ತಲಿದ್ದ. ಅಷ್ಟರಲ್ಲಿ ಅನ್ನಪೂರ್ಣೆ ಎಲ್ಲಿಂದಲೋ ಬಿಟ್ಟ ಬಾಣದಂತೆ ಬಂದು, ಅವನನ್ನು ಕೈಹಿಡಿದು ಮತ್ತೆ ಕೋಣೆಯೊಳಗೆ ಎಳೆದೊಯ್ದಳು. "ಅಪ್ಪಾ ಅಪ್ಪಾ, ನೋಡಿದೆಯಾ ಪಾಪಾನ ಚಿನ್ನಾಟ!" ಎಂದಳು.

ಗೋವರ್ಧನನ ಮುಖದಲ್ಲಿಯ ವಿರಕ್ತಿಭಾವವಡಗಿ ಅನುರಕ್ತಿಭಾವ ಮೈದೋರಿತು. ಪಾಪಾ ಡಬ್ಬ ಹೊರಳಿದ ಹೊಸ ದೃಶ್ಯವನ್ನು ಕಂಡು ಅನ್ನಪೂರ್ಣೆ ಆನಂದದಿಂದ ತಾಯಿಗೆ ಸುದ್ದಿ ಹೇಳಲು ಓಡಿಹೋಗಿದ್ದಳು; ಮತ್ತು ತಾಯಿಯನ್ನು ಹಿಂದುಳಿಸಿ ತಿರುಗಿ ಓಡಿ ಬಂದು ತಂದೆಯನ್ನು ಸೆರೆಹಿಡಿದು ನಿಲ್ಲಿಸಿದಳು. ಹೈಮವತಿ ಬಂದು ಕುಮಾರನ ನೂತನ ಸಾಹಸದ ಲೀಲೆಯನ್ನು ಕಂಡು ಉಲ್ಲಾಸದಿಂದ ಹಿಗ್ಗಿದಳು.

"ನಿಲ್ಲಬೇಡ, ಬೆನ್ನಮೇಲೆ ಶಾಬ್ಬಾಸಿಕೆ ಕೊಟ್ಟು ಎತ್ತಿಕೋ. ಜಟ್ಟಿ ಸಾಮು ತೆಗೆದುತೆಗೆದು ಮುಖ ಜಜ್ಜಿಕೊಂಡ," ಎಂದು ಗೋವರ್ಧನನು ನಗುತ್ತ ನುಡಿದ.

ಹೈಮವತಿ ಮೆಲುನಗೆಯೊಂದಿಗೆ ಕೂಸಿನ ಬೆನ್ನು ಚಪ್ಪರಿಸಿ ಎತ್ತಿಕೊಂಡು ಎದೆಗವಚಿಕೊಂಡಳು. ಅದನ್ನು ನೋಡಿ ಕೋಣೆಯಿಂದ ಹೊರಬೀಳುವುದೇ ತಡ, ಗೋವರ್ಧನನ ಮೋರೆ ಕಳೆಗುಂದಿತು. ಹೈಮವತಿಯ ಹೃದಯವನ್ನು ತರಲನ ರೂಪುವೆತ್ತ ಸ್ಮೃತಿ - ಅವನ ಮಗು—ತಬ್ಬಿಕೊಂಡಿದೆ! ಗೋವರ್ಧನನು ಆ ರಾಜ್ಯಕ್ಕೆ ಹೊರತಾದ ಶಾಪಗ್ರಸ್ತ ಯಕ್ಷ! ಅನ್ನಪೂರ್ಣೆ ಅಲ್ಲಿ ಕೊಂಚ ಇಂಬನ್ನು ದೊರಕಿಸಲು ಪ್ರಯತ್ನಿಸಿದಳು; ಇನ್ನು ಆಕೆಗೂ ಅರ್ಧಚಂದ್ರ! ಹೈಮವತಿಗೆ ಅವಳದೇನು ಸಂಬಂಧ? ಅವಳು ತರಲನ ಪರಿತ್ಯಕ್ತ ಸತಿ-ಸುತರ ಸಂಗಾತಿ ಮಾತ್ರ!

ಇದೇ ರೀತಿ ಒಂದು ವರ್ಷವೂ ಗತಿಸಿಹೋಯಿತು. ಮಗುವಿಗೆ ಕಾಲು ಬಂದವು. ಒಂದು ದಿನ ಅದು ಗೋವರ್ಧನನನ್ನು ಕಂಡು "ಅಪ್ಪಾ ಅಪ್ಪಾ" ಎಂದು ಕೂಗುತ್ತ, ತಪ್ಪುಹೆಜ್ಜೆಯಿಡುತ್ತ ಓಡಿಹೋಗಿ, ಅವನ ದೋತರವನ್ನು ಹಿಡಿದುಕೊಂಡಿತು; ಕಂಕುಳಕ್ಕೇರಬೇಕೆಂದು ಅಡರತೊಡಗಿತು. ಆಗ ಗೋವರ್ಧನನು ಅತ್ತಿತ್ತ ನೋಡಿ, ಹಲ್ಲು ಕಡಿದು, ಮಗುವಿನ ಕೈಬಿಡಿಸಿಕೊಂಡು ಮುಂದೆ ಸಾಗುವವ,—ಹೈಮವತಿ ಆ ಕಡೆಗೇ ಬರುತ್ತಲಿದ್ದಳು. ಅವನು ತಟ್ಟನೆ ಮಗುವನ್ನೆತ್ತಿಕೊಂಡು ಮುದ್ದಿಸಿದ. ಅವಳು ಸನಿಯಕ್ಕೆ ಬರುತ್ತಲೇ ನಗುತ್ತ ಅವನೆಂದ: "ಮಗುವಿನ ತಾಯಿಯೊ, ಮಗು ನನಗೆ ಅಪ್ಪ ಎನ್ನುತ್ತಿದೆ!"

ಹೈಮವತಿ ಮುಖ ಕೆಂಪಗೆ ಮಾಡಿಕೊಂಡು ಹೊರಟುಹೋದಳು; ಗೋವರ್ಧನನು ಮಗುವನ್ನಲ್ಲಿಯೇ ಇಳಿಸಿ ಮುಖ ಕಪ್ಪಗೆ ಮಾಡಿಕೊಂಡು ನಡೆದ. ಮಗು ಕೂಗತೊಡಗಿತು: "ಅಪ್ಪಾ, ಅಪ್ಪಾ—"

ಒಂದಿನ ಗೋವರ್ಧನನು ಶಾಲೆಯಿಂದ ಬಂದು ತನ್ನ ಕೋಣೆಗೆ ಹೋದ. ಮಗು ಮುಗಿಯಲಾದ ಚಿತ್ರವೊಂದನ್ನು ಹರಿದು ತಿನ್ನುತ್ತಲಿತ್ತು. ಬಣ್ಣದಿಂದ ಅದರ ಮುಖವೆಲ್ಲಾ ಚಿತ್ರವಿಚಿತ್ರವಾಗಿತ್ತು. ಗೋವರ್ಧನನ ಕಣ್ಣುಗಳು ಸಿಟ್ಟೇರಿ ಕೆಂಪಗಾದವು; ಹಣೆಯಲ್ಲಿ ನರಗಳೆದ್ದವು; ಮೈಯೆಲ್ಲ ಕಟ್ಟಿಗೆಯಂತೆ ಕಠೋರವಾಯಿತು. ಅವನು ಕೆಲಹೊತ್ತು ಸ್ತಂಭಿತನಾಗಿ ನಿಂತುಕೊಂಡು, ಬಳಿಕ ಭರ್ರನೆ ಮಗುವನ್ನೆತ್ತಿಕೊಂಡು, ನೆಲಕ್ಕಪ್ಪಳಿಸಿ ಪುಡಿ ಪುಡಿ ಮಾಡಲೇ ಎಂಬಂತಹ ಸಿಟ್ಟನ್ನು ನಗೆಯಾಗಿಸಿ ಹೊರಗೆ ಬಂದು ಕೂಗಿದ: "ಎಲ್ಲಿದ್ದೀ ಮಗುವಿನ ತಾಯಿಯಾ, ಇಕಾ ನೋಡಿದೆಯಾ ಕುಮಾರನ ಶೌರ್ಯದ ಕೀರ್ತಿಯನ್ನು!"

ಏನೋ ತಮಾಷೆ ನೋಡುವೆನೆಂಬ ತವಕದಿಂದ ಹೈಮವತಿ ಹಸನ್ಮುಖದಿಂದ ಹೊರಗೆ ಬಂದಳು. ಮಗುವಿನ ಚೆಂದವನ್ನು ಕಂಡು ಅವಳು ಸಿಟ್ಟಿನಿಂದ ಸ್ತಂಭಿತೆಯಾಗಿ ನಿಂತಳು. ಒಂದೆರಡು ನಿಮಿಷಗಳ ತರುವಾಯ ಅವಳ ಮುಖದಿಂದ ಮಾತು ಹೊರಟಿತು: "ಪ್ರೈವಗೇಡಿ ಮಗು! ಆಃ, ಚಿತ್ರದ ತಲೆ ತಿಂದುಬಿಟ್ಟೆಯಾ? ಬಾ, ನಿನ್ನ ತಲೆ ನಾನು ತಿನ್ನುತ್ತೇನೆ."

ಮಗುವನ್ನು ಹೊಡೆಯಲೆಂದು ಹೈಮವತಿ ಕೈಯೆತ್ತಿಕೊಂಡು ಗೋವರ್ಧನನ ಕಡೆ ಹೋದಳು. ಅವನು ನಗುಮೊಗದಿಂದ ಅವಳ ಕೈಯನ್ನು ತನ್ನ ಕೈಯಲ್ಲಿ ಸೆರೆಗೊಳಿಸಿ, "ಹೊಡೆದರೇನು ಹೋದ ಚಿತ್ರ ಬರುತ್ತದೆಯೆ? ಮಾಡಿದ್ದು ಒಳ್ಳೆಯ ಕೆಲಸವೇ ಆಯಿತು—ನನ್ನ ಚಿತ್ರವನ್ನು ಹರಿಯಿತು. ನಾನು ಮಗುವಿನ ಚಿತ್ರವನ್ನು ತೋರಿಸಲಿಕ್ಕೆಂದು ಬಂದರೆ, ಇವಳು ಬಂದಿದ್ದಾಳೆ ಓಡಿ, ಹೊಡೆಯಲಿಕ್ಕೆ!"

ಕೋಪದ ಲವಲೇಶವೂ ಕಾಣದ ಗೋವರ್ಧನನ ಮಾತಿನಿಂದ ಹೈಮವತಿ ಮೋಸಹೋದಳು. ನಗುತ್ತ ಅವಳೆಂದಳು: "ಇಷ್ಟು ಕೆಟ್ಟ ಹಾವಳಿ ಮಾಡಿದರೆ ಸಿಟ್ಟು ಬರಲಿಕ್ಕಿಲ್ಲವೆ? ನಿಮಗೆ ಸಿಟ್ಟು ಬರುವುದಿಲ್ಲವೆ?"

ಹೈಮವತಿಯ ಕೋಮಲವಾದ ಕರವನ್ನು ಕೊಂಚ ಹಿಸುಕಿ ಗೋವರ್ಧನನು ಉತ್ತರವಿತ್ತ: "ನಷ್ಟಕ್ಕೆ ಈ ರೀತಿ ಪರಿಹಾರ ದೊರೆಯುತ್ತಿದ್ದರೆ, ಇಂಥ ಕಿರುಕುಳ ನಷ್ಟ ಆಗಲೊಲ್ಲದೇಕೆ."

ಒಬ್ಬರೊಬ್ಬರ ಕಡೆ ನೋಡಿ ಇಬ್ಬರೂ ಪುನಃ ಕೃತಾರ್ಥತೆಯ ನಗೆ ನಕ್ಕರು. ಅನ್ನಪೂರ್ಣೆ ಓಡುತ್ತ ಬಂದು ಕಿಲಕಿಲ ನಗುತ್ತ ಎರಡೂ ಕೈಗಳನ್ನು ನೀಡಿ, "ಪಾಪ ಏನು ಚೆಂದ ಆಗಿದೆ! ನಾನು ಎತ್ತಿಕೊಳ್ಳುತ್ತೇನೆ, ತಾ ಅಪ್ಪ," ಎಂದಳು.

"ಬೇಡ, ನಿನಗೆ ಕರೆದುಕೊಳ್ಳಲಿಕ್ಕೆ ಆಗುವುದಿಲ್ಲ, ಕೆಡವೀ."

"ಇಲ್ಲ, ಕೆಡವುವುದಿಲ್ಲ, ಒಂದು ಸ್ವಲ್ಪ ಕೊಡು."

ಅನ್ನಪೂರ್ಣೆ ಮಗುವನ್ನೆತ್ತಿಕೊಳ್ಳಲು ಎಳೆದಾಡತೊಡಗಿದಳು. ಮಗುವೂ ಅವಳ ಕಡೆ ಹೋಗಲು 'ಅಕ್ಕಾ ಅಕ್ಕಾ' ಎನ್ನುತ್ತ ಜರಿಯತೊಡಗಿತು.

"ಅನು ಕರೆದುಕೊಂಡು ಅಡ್ಡಾಡುತ್ತಾಳೆ, ಕೊಡಿರಿ" ಹೈಮವತಿ ಹೇಳಿದಳು.

"ಹಿಡಿ, ಗಟ್ಟಿಯಾಗಿ ಹಿಡಿದುಕೋ" ಎನ್ನುತ್ತ ಗೋವರ್ಧನನು ಮಗುವನ್ನು ಅನ್ನಪೂರ್ಣೆಯ ಕಂಕುಳಲ್ಲಿಟ್ಟ.

ಆನಳೂ 'ಹೂಂ' ಎಂದೆತ್ತಿಕೊಂಡಳು. ಗೋವರ್ಧನನು ಕೊಟ್ಟು ಕೈಬಿಡುತ್ತಲೇ, ಮಗು ಅಕ್ಕನು ಎತ್ತಿಕೊಂಡಳೆಂಬ ಸಂತಸದಿಂದ ಉಬ್ಬಿ ಪುಟಿಯತೊಡಗಿತು. ಹೊಯ್ದಾಟವನ್ನು ಸಾವರಿಸಿಕೊಳ್ಳುವುದು ಅನ್ನಪೂರ್ಣೆ-ಗಾಗಲಿಲ್ಲ ಜೋಲಿ ಹೊಡೆದು ಮಗುವನ್ನು ಹಾಕಿಕೊಂಡು ಬಿದ್ದುಬಿಟ್ಟಳು. ಇಬ್ಬರೂ ಗೊಳೋ ಎಂದು ಅಳಲಾರಂಭಿಸಿದರು. ಗೋವರ್ಧನನು ಸಿಟ್ಟಿನಿಂದ "ನಾನು ಮೊದಲೆ ಹೇಳಲಿಲ್ಲವೆ, ನಿನ್ನಿಂದಾಗುವುದಿಲ್ಲವೆಂದು?" ಎಂದೆ-ನ್ನುತ್ತ ಅನ್ನಪೂರ್ಣೆಯನ್ನು ಹೊಡೆಯಲು ಹೋದ.

ಅವನನ್ನು ಕೈಹಿಡಿದು ತಡೆದು ಹೈಮವತಿಯೆಂದಳು: "ನನ್ನ ಮಗ-ಳನ್ನು ಹೊಡೆಯಲಿಕ್ಕೆ ಯಾರು ನೀವು? ಅವಳು ಮಾಡಿದ ತಪ್ಪೇನು? ತನ್ನ ತಮ್ಮನನ್ನು ತಾನು ಕೆಡವಿದ್ದಾಳೆ, ಹತ್ತುಸಾರೆ ಕೆಡವುತ್ತಾಳೆ!"

ಆಗೀಗಾಗಲಿ ತನ್ನ ಮಾತು ತನಗೆ ಮುಟ್ಟಿದುದಕ್ಕೆ ಗೋವರ್ಧನನ ಮನಸು ಉಲ್ಲಸಿತವಾಯಿತು. ಅವನು ನಕ್ಕು ನುಡಿದ: "ನಮ್ಮಿಬ್ಬರ ಸಂಬಂಧ. ಪಾಣಿಗ್ರಹಣ ಮಾತ್ರವೆ! ಇದರ ಮುಂದೆ ಋಷ್ಯಮೂಕ ಪರ್ವತ!"

ಸಹಾಸ್ಯ ನಯನಗಳಿಂದ ಗೋವರ್ಧನನನ್ನು ನೋಡುತ್ತ ಹೈಮವತಿ ಮಗು ಅನ್ನಪೂರ್ಣೆಯರನ್ನು ಸಂತಯಿಸತೊಡಗಿದಳು

## ೨೪

ಗೋವರ್ಧನನ ಕಣ್ಣುಗಳು ಯಾವಾಗಲೂ ತನ್ನ ದರ್ಶನಕ್ಕಾಗಿ ಹಂಬಲಿಸುವವೆಂಬುದನ್ನು ಹೈಮವತಿ ಬಲ್ಲಳು. ಅವನು ಶಾಲೆಗೆ ಹೋಗುವಾಗ ಕಟ್ಟಕಡೆಯ ವರೆಗೂ ನೋಡಬೇಕು, ತಿರುಗಿ ಬರುವಾಗ ಮೊಟ್ಟಮೊದಲ ಬಾರಿಯೇ ನೋಡಬೇಕು; ಅವನ ಈ ತೃಷ್ಣೆಯನ್ನೂ ಅವಳು ಲಕ್ಷಿಸದಿಲ್ಲ

ಆದುದರಿಂದ ಅವನು ಹೋಗುವ ಬರುವ ಸಮಯಗಳಲ್ಲಿ ತನ್ನ ಕೋಣೆಯ ಕಿಡಿಕಿಯಲ್ಲಿ ನಿಂತಿರುತ್ತಿದ್ದಳು ಹೈಮವತಿ. ಹೀಗೆ ಹೋಗುವಾಗಲೂ ಬರು-ವಾಗಲೂ ಬೀದಿಯಿಂದಲೇ ಅವಳನ್ನು ನೋಡುವುದು ಗೋವರ್ಧನನ ಕಣ್ಣುಗಳಿಗೆ ರೂಢಿಯಾಗಿಹೋಗಿತ್ತು. ಅದು ಎಂದಾದರೊಮ್ಮೆ ತಪ್ಪಿದರೂ ಇಡೀ ದಿನ ಅವನಿಗೆ ಹುರುಹುರು ಎನಿಸುತ್ತಿತ್ತು.

ಹೈಮವತಿ ರಾತ್ರಿ ಉಣ್ಣುವುದು ಗೋವರ್ಧನ ಅನ್ನಪೂರ್ಣೆಯರ ಊಟವಾದ ಬಳಿಕ. ಅವಳು ಊಟಕ್ಕೆ ಕುಳಿತಳೆಂದರೆ ಅವನು ಅವಳ ಕೋಣೆಯೊಳಗೆ ಮಗು ಅನ್ನಪೂರ್ಣೆಯರನ್ನು ಆಡಿಸುತ್ತ ಕುಳಿತುಕೊಳ್ಳುತ್ತಿದ್ದ. ಅನ್ನಪೂರ್ಣೆ ಒಬ್ಬಳೇ ಇರುವುದಕ್ಕೆ ಅಂಜುತ್ತಿದ್ದಳು, ನಿದ್ದೆ ಹತ್ತುವ ವರೆಗೂ ಅಪ್ಪನನ್ನು ಬಿಡುತ್ತಿರಲಿಲ್ಲ. ಒಂದೊಂದು ದಿನ ಹೈಮವತಿ ಊಟ ಉಡಿಗೆ ಮುಗಿಸಿಕೊಂಡು ಹೋದಾಗ ಅವಳಿಗಿನ್ನೂ ನಿದ್ದೆ ಹತ್ತಿರುತ್ತಿರಲಿಲ್ಲ. ಗೋವರ್ಧನನು ಅವಳ ಬದಿಯಲ್ಲಿ ಕತೆ ಹೇಳುತ್ತ ಕುಳಿತಿರುತ್ತಿದ್ದ. ಕತೆಯನ್ನು ಕೇಳುತ್ತ ಕೇಳುತ್ತಲೇ ಅನ್ನಪೂರ್ಣೆಗೆ ನಿದ್ದೆ ಬರುತ್ತಿದ್ದಿತು. ಆಮೇಲೂ ಅವನು ಅಲ್ಲಿಂದ ಎದ್ದುಹೋಗುವ ಲಕ್ಷಣವೇ ತೋರುತ್ತಿರಲಿಲ್ಲ. ಹೈಮುಮವತಿ ಕೆಲಹೊತ್ತು ಕಾಯ್ದು "ರಾತ್ರಿಯಾಯಿತು, ಮಲಗಲಿಕ್ಕೆ ಹೋಗಿರಿ" ಎಂದು ಹೇಳಬೇಕಾ-ಗುತ್ತಿತ್ತು. "ಆಂ, ಊಂ, ಹೋಗುತ್ತೇನೆ" ಎಂದು ಅವನು ಎದ್ದು ಹೋಗುತ್ತಿದ್ದ.

ಒಂದೊಂದು ದಿನ, ಹೈಮವತಿ ಮಲಗಲು ಹೋದಾಗ, ಗೋವರ್ಧ-ನನು ಮಗು ಅನ್ನಪೂರ್ಣೆಯರ ನಡುವೆ ಅವಳ ಹಾಸಿಗೆಯಲ್ಲಿಯೇ ಮಲಗಿರುತ್ತಿದ್ದ. ಅವನ ನಿದ್ದೆ ತಾನಾಗಿಯೇ ಹರಿಯುವ ಸಮಯವನ್ನು ನಿರೀಕ್ಷಿಸುತ್ತ ಅವಳು ಏನನ್ನಾದರೂ ಹೊಲಿಯುತ್ತ ಕುಳಿತುಕೊಳ್ಳುತ್ತಿದ್ದಳು. ಒಂದೋ ಕುಳಿತು ಕುಳಿತು ಅವಳ ನಡ ಬಿಗಿಯಬೇಕು, ಒಂದೋ ಮಗು ಎದ್ದು ಅಳ-ತೊಡಗಬೇಕು; ಆಗ ಅವಳು ನಿಟ್ಟುಸಿರುಗರೆದು ನಿರುಪಾಯಳಾಗಿ, "ಏನರಿ ನಿದ್ದೆ ಬಂತೆ? ರಾತ್ರಿ ಬಹಳವಾಗಿದೆ, ಕೋಣೆಗೆ ಹೋಗಿ ಮಲಗಿಕೊಳ್ಳಿರಿ" ಎಂದು ಮೆಲುದನಿಯಲ್ಲಿ ನಿಧಾನವಾಗಿ ನುಡಿಯುತ್ತಿದ್ದಳು. ಗೋವರ್ಧನನು ಗಡಬಡಿಸಿ ಎದ್ದು "ಹಾಂ, ಹೋಗುತ್ತೇನೆ" ಎಂದು ಹೋಗುತ್ತಿದ್ದ—ಕಳವಿಗೆ ಹೋಗಿ ಸಿಕ್ಕುಬಿದ್ದ ಅಪರಾಧಿಯಂತೆ ಅಪ್ರತಿಭನಾಗಿ. ಆದರೆ ಇಂತಹ ಅಪ

ರಾಧ ಆಪನಿಂದ ನಿತ್ಯವೂ ಎಂಬಂತೆ ಘಟಿಸುತ್ತಿದ್ದಿತು. ಗೋವರ್ಧನನು ಹೊರಟುಹೋದನೆಂದರೆ ಹೈಮವತಿ ಅವನನ್ನೇ ದಿಟ್ಟಿಸುತ್ತಿದ್ದು, ಮೆಲ್ಲಗೆ ತನ್ನ ಕೋಣೆಯ ಬಾಗಿಲನ್ನಿಕ್ಕಿ, ಮಮತೆಯ ವೇದನೆಯಿಂದ ಉಸಿರ್ಗರೆಯುತ್ತಿ-ದ್ದಳು.

ಮತ್ತೆಷ್ಟೋ ದಿನ ಅಪರಾತ್ರಿಯಲ್ಲಿ ಗೋವರ್ಧನನು ಹೈಮವತಿಯ ಕೋಣೆಯ ಇಕ್ಕಿದ ಬಾಗಿಲಿನ ಹೊರಗಡೆ ಎಷ್ಟೋ ಹೊತ್ತು ಬಂದು ನಿಂತು ನೀರವವಾಗಿ ಮರಳಿದುದುಂಟು. ಅದರ ಅರಿಕೆ ಅವಳಿಗಾಗುತ್ತಿತ್ತು. ಅವನ ಮೇಲೆ ಅವಳಿಗೆ ಕೋಪವುಂಟಾಗುತ್ತಿರಲಿಲ್ಲ. ಸಮವೇದನೆಯು, ಕರುಣೆಯು ನೆರೆ ಬರುತ್ತಿತ್ತು ಅವಳ ಹೃದಯದಲ್ಲಿ, ಅಶ್ರುಕಣಗಳು ಬಂದು ನಿಲ್ಲುತ್ತಿದ್ದವು ಅವಳ ಕಣ್ಗೊನೆಗಳಲ್ಲಿ.

ಮಗುವಿಗೆ ವಿಷಮಜ್ವರ ಬಂದವು. ತರಲನ ಮಗನ ಚಿಕಿತ್ಸೆಗಾಗಿ ತಾನು ಡಾಕ್ಟರರನ್ನು ಕರೆತರಬೇಕು, ತಾನು ಉಪಚರಿಸಬೇಕು, ತಾನು ಹಣ ವನ್ನು ವೆಚ್ಚಮಾಡಬೇಕು—ಗೋವರ್ಧನನ ಮನಸು ವಿರಾಗದಿಂದ ಬಿರುಸಾ-ಯಿತು. ಹೈಮವತಿ ಬಂದು ಬಾಡಿದ ಮೊಗದಿಂದ ಕಣ್ಣಲ್ಲಿ ನೀರು ತಂದು ಪ್ರಶ್ನಿಸಿದಳು: “ಏನರಿ, ಏನಾಗುತ್ತದೋ! ಮಗು ಬದುಕಬಹುದೆ?”

ತನ್ನ ಜೀವವನ್ನು ಕೊಟ್ಟಾದರೂ ಮಗುವನ್ನು ಉಳಿಸಿಕೊಳ್ಳಬೇಕೆಂದು ಗೋವರ್ಧನನಿಗೆನಿಸಿತು. ಅವನು ನಸುನಕ್ಕು ಹೈಮವತಿಗೆ ಧೈರ್ಯ ಹೇಳಿದ: “ಏನು ಭಯ? ಸಾಹೇಬ ಡಾಕ್ಟರಿಂದ ಚಿಕಿತ್ಸೆ ಮಾಡಿಸುತ್ತೇನೆ.”

ಹೆಸರುವಾಸಿಯಾದ ದೇಶೀಯ ವಿದೇಶೀಯ ಡಾಕ್ಟರಿಬ್ಬರು ಮಗುವನ್ನು ನೋಡತೊಡಗಿದರು. ಅರಸುಮಗನಿಗೆ ತಕ್ಕಂತೆ ಪಥ್ಯಪಾನೀಯಗಳು ನಡೆ ದವು. ಗೋವರ್ಧನನೇ ಕೈಮುಟ್ಟಿ ಆರೈಕೆ ಮಾಡಿದ. ಅವನ ಅಸ್ವಸ್ಥತೆ ಯಲ್ಲಿ ತರಲ ಹೈಮವತಿಯರು ಶುಶ್ರೂಷೆ ಮಾಡಿದ್ದರು ಈಗ ಅವರ ಮಗನ ಶುಶ್ರೂಷೆಯಿಂದ ಆ ಋಣವನ್ನು ಅವನು ತೀರಿಸಲನುವಾದ.

ಗೋವರ್ಧನನು ಲೆಕ್ಕಮಾಡಿ ನೋಡಿದ. ಕೊಟ್ಟುದಕ್ಕಿಂತ ಪಡೆದುದು ಹೆಚ್ಚೆಂದು ಅವನಿಗೆ ತೋರಿತು. ಹೈಮವತಿ ಮಗುವನ್ನು ತೊಡೆಯ ಮೇಲೆ ಇಟ್ಟುಕೊಂಡು ಕುಳಿತಾಗ ಅವನು ಅವಳ ತೊಡೆಗೆ ಹತ್ತಿ ಕುಳ್ಳಿರುತ್ತಿದ್ದ;

ಅವಳ ಕೈಯಲ್ಲಿ ಏನನ್ನಾದರೂ ಕೊಡುತ್ತಿದ್ದಾಗ ಅವಳ ಕರಸ್ಪರ್ಶವಾಗುತ್ತಿತ್ತು; ಮಗುವನ್ನು ನೋಡಿಕೊಳ್ಳುವುದಕ್ಕಾಗಿ ರಾತ್ರಿಯಲ್ಲಿ ಕೂಡ ಅವಳ ಕೋಣೆಯಲ್ಲಿಯೇ ಇರುತ್ತಿದ್ದ; ಅವಳ ಹಾಸಿಗೆಯಲ್ಲಿಯೇ ಮಲಗುವ ಸೌಭಾಗ್ಯವನ್ನು ಹೊಂದಿದ್ದ,—ಮಗು ಮಾತ್ರ ನಡುವೆ;—ನಿಮ್ಮ ಕೋಣೆಗೆ ಹೋಗಿರೆಂದು ಅವಳೆನ್ನುತ್ತಿರಲಿಲ್ಲ; ನಿದ್ದೆಗೆಟ್ಟು ಬಳಲಿದ ಹೈಮವತಿ ಸ್ವಲ್ಪ ಮಲಗಿದಳೆಂದರೆ ಗೋವರ್ಧನನೆದ್ದು ಮುಗ್ಧನಯನಗಳಿಂದ ಅವಳ ಸುಪ್ತಸೌಂದರ್ಯವನ್ನು ನೋಡುತ್ತ ಕುಳಿತಿರುತ್ತಿದ್ದ.

ಈ ಕಂಗಾಲತನಕ್ಕಾಗಿ ಗೋವರ್ಧನನ ಒಂದು ಮನಸು ಒಮ್ಮೊಮ್ಮೆ ಅವನಿಗೆ ಛೀಹಾಕುತ್ತಿತ್ತು. 'ಛೀ ಛೀ, ಹೀಗೆ ಪರಸ್ತ್ರೀಲೋಲುಪನಾಗುವುದು ಅಸಭ್ಯ ಕಾಪುರುಷರ ಲಕ್ಷಣ!'

ಇನ್ನೊಂದು ಮನಸು ತಟ್ಟನೆ ನುಡಿಯುವುದು: 'ಯಾರಿಗೆ ಪರಸ್ತ್ರೀ? ಲೋಕಸಮಕ್ಷಮದಲ್ಲಿ, ಧರ್ಮಸಮ್ಮತವಾಗಿ ಮದುವೆಯಾದ ಸ್ವಸ್ತ್ರೀಯಲ್ಲವೆ?'

'ಹಾಗಾದರೆ ಕಾಲಿಯ ಮುಂದೆ ಮಾಡಿದ ಪ್ರತಿಜ್ಞೆ?'

ಮೊದಲ ಮನಸಿನ ಈ ಪ್ರಶ್ನೆಗೆ ಎರಡನೆಯ ಮನಸು ಭಯಗೊಳ್ಳುತ್ತಿತ್ತು. ಅದಕ್ಕೆ ಸಮಾಧಾನ ಹೇಳಲು ಪ್ರಯತ್ನಿಸುತ್ತಿತ್ತು: 'ಹೈಮವತಿಯನ್ನು ನಾನು ಮೊದಲೇ ಪ್ರೀತಿಸುತ್ತಿದ್ದೆ; ಈಗಲೂ ಪ್ರೀತಿಸುತ್ತೇನೆ. ಎಂತಲೇ ಅವಳನ್ನು ರಕ್ಷಿಸುವ ಪ್ರವೃತ್ತಿಯಾದುದು, ಕಾಲೀಮಾತೆಯ ಆಣೆಯಿಟ್ಟುಕೊಳ್ಳಲು ಸಾಹಸಮಾಡಿದುದು. ಇಂತಹ ಪ್ರೀತಿಪಾತ್ರಳನ್ನು ಒಂದಿಷ್ಟು ನೋಡಿದರೆ, ಒಂದಿಷ್ಟು ಮುಟ್ಟಿದರೆ ಆಣೆಯನ್ನು ಮುರಿದಂತಾಯಿತೆ?'

ಈ ಪೊಳ್ಳುನುಡಿಗೆ ಮೊದಲ ಮನಸು ನಗುತ್ತಿತ್ತು. 'ಎಲಾ, ಬರೀ ನಡತೆಯನ್ನು ನೋಡಿದರಾಗದು, ಒಳ ಉದ್ದೇಶವನ್ನು ಯೋಚಿಸಬೇಕು. ನಿನ್ನ ಲೋಲುಪತೆಗೆ ಕೊನೆಯೇ ಇಲ್ಲ. ಹೈಮವತಿಯ ಅನುಮೋದನೆ ಇಲ್ಲವೆಂದೇ ಎಲ್ಲವನ್ನೂ ನುಂಗಲಾಗಲಿಲ್ಲ. ಇಲ್ಲದಿದ್ದರೆ....'

ಈ ವಿಕಟಹಾಸ್ಯದಿಂದ ಎರಡನೆಯ ಮನಸು ಲಜ್ಜೆಯಿಂದ ಕುಂಠಿತವಾಗುತ್ತಿತ್ತು. ಹೌದು, ಹೈಮವತಿಯ ನಿಶ್ಚೇಷ್ಟ ಉದಾಸೀನತೆ ಅವನನ್ನು

ಹಿಂದೊತ್ತದಿದ್ದರೆ, ಈ ದ್ವಂದ್ವದಲ್ಲಿ ಅವನ ಸಂಯಮ ಸ್ಥೈರ್ಯಗಳು ಅವನ ಅನುರಾಗಕ್ಕೆ ಸೋತುಬಿಡುತ್ತಿದ್ದವು. ಅವಳ ಮನೋಭಾವವನ್ನು ಉಲ್ಲಂಘಿಸಿ ಹೋಗಲು ಧೈರ್ಯವಿಲ್ಲ ಅವನಿಗೆ; ಹೆಚ್ಚಿನದನ್ನು ಆಶಿಸಿದರೆ ಗಂಟು ಬಡ್ಡಿ ಎರಡನ್ನೂ ಕಳೆದುಕೊಂಡೇನೆಂಬ ಗಾಬರಿ. ಎಂತಲೇ ಅವಳ ಅಪ್ರಕಾಶಿತ ಅನುರಾಗದಿಂದ ದೊರೆತಷ್ಟರಲ್ಲಿಯೇ ಅವನು ಕೃತಾರ್ಥನಾಗಿರುತ್ತಿದ್ದ.

ಈ ಅನುರಾಗದ ಕಣ್ಣುಮುಚ್ಚಾಟದಲ್ಲಿ ಗೋವರ್ಧನನ ಕುಂದಿಲ್ಲದ ಪ್ರಯತ್ನದಿಂದ ಮಗು ಗುಣಹೊಂದಿತು. ಹೈಮವತಿಯ ಮುಖಮಂಡಲದ ಪ್ರಫುಲ್ಲತೆಯ ಪಾರಿತೋಷಕವನ್ನು ಪಡೆದು ಗೋವರ್ಧನನು ತನ್ನ ಕೋಣೆಗೆ ಪ್ರಸ್ಥಾನಬೆಳೆಯಿಸಿದ.

## ೨೫

ಮತ್ತೆರಡು ವರುಷಗಳು ಸಂದವು.

ಆಗ ಮಳೆಗಾಲ. ಮೋಡಗಳು ಕವಿದುಬಂದಿವೆ. ಮಧ್ಯಾಹ್ನದ ಬೆಳಕೂ ಮಬ್ಬಾಗಿದೆ. ಕಿಡಿಕಿಯ ಸಲಾಕೆಗಳನ್ನು ಹಿಡಿದು ನಿಂತುಕೊಂಡು ಮಗು ಮತ್ತು ಅನ್ನಪೂರ್ಣೆ 'ಬಣ್ಣವ ಕೊಡುವೆನು ಬಾರೆಲೊ ಮಳೆಯೆ, ಸುಣ್ಣವ ಕೊಡುವೆನು ಸುರಿಯಲೊ ಮಳೆಯೆ' ಎಂದು ಕೂಗಿ ಹಾಡಿ ಮಳೆಯನ್ನು ಕರೆಯುತ್ತಿದ್ದರು. ಅವರ ಹಿಂದುಗಡೆಯಲ್ಲಿ ನಿಂತಿದ್ದ ಹೈಮವತಿ, ಬರಲಾದ ಮಳೆಗಂಜಿ ಅವಸರದಿಂದ ಹೋಗುತ್ತಿದ್ದ ಜನರನ್ನು ನೋಡುತ್ತಲಿದ್ದಳು. ಗೋವರ್ಧನನು ಇನ್ನೂ ಮನೆಗೆ ಬಂದಿಲ್ಲ. ಅವನು ಮಳೆಗೆ ಸಿಕ್ಕುವನೋ ಏನೋ, ಹೊತ್ತು ಮುಳುಗುವ ತನಕ ಮಳೆ ಬರಬೇಡ ಎಂದು ಹಾರೈಸುತ್ತಲಿದ್ದಳು.

ತಂಗಾಳಿ ಬಿಟ್ಟು ಮಳೆ ಸುರಿಯಲಾರಂಭಿಸಿತು. ಬೀದಿಯಲ್ಲಿಯ ಜನರು ಚಾಟಿಗಾಗಿ ದಿಕ್ಕೆಟ್ಟು ಓಡತೊಡಗಿದರು. ಕೊಡೆ ಹಿಡಿದುಕೊಂಡ ಪಥಿಕನೊಬ್ಬನು ಓಡಿ ಬಂದು, ಹೈಮವತಿಯ ಮನೆಯೆದುರಿನ ಮನೆಯ ಕಟ್ಟೆಯನ್ನೇರಿ, ಕೊಡೆಯನ್ನಿಳಿಸಿ, ಮಳೆಯ ಅಕಲ್ಪಿತವಾದ ಆಕ್ರಮಣಕ್ಕೆ ಕೌತುಕ-

ಬಟ್ಟು ಮುಗುಳ್ನಕ್ಕ. ಅವನನ್ನು ನೋಡಿ ಹೈಮವತಿ ಅವಿಶ್ವಾಸ-ವಿಸ್ಮಯ-ಆನಂದಗಳು ಬೆರೆದ ಆಕುಲಸ್ವರದಲ್ಲಿ ಕೂಗಿದಳು: "ತರಲ!"

ತರಲನು ತಲೆಯನ್ನು ತಗ್ಗಿಸಿಕೊಂಡು ನಿಂತು ಕೊಡೆಯ ನೀರನ್ನು ಬಸಿಯುತ್ತಿದ್ದ. ತನ್ನ ಹೆಸರಿನ ಕರೆ ಕಿವಿಗೆ ಬೀಳಲು ಮೊಗವೆತ್ತಿ ನೋಡಿದ. ಹರ್ಷವಿಷಾದಗಳ ಸಮ್ಮಿಶ್ರಣದ ಮೂರ್ತಿಯಂತೆ, ಆಕುಲದೃಷ್ಟಿಯಿಂದ ನೋಡುತ್ತ, ಬಿದಿರೆಲೆಯಂತೆ ನಡುಗುತ್ತ ನಿಂತಿದ್ದಳು ಹೈಮವತಿ. ತರಲನು ಅವಳನ್ನು ನೋಡಿ ಮತ್ತೆ ತಲೆ ತಗ್ಗಿಸಿ ಕೊಡೆಯ ನೀರನ್ನು ಬಸಿಯತೊಡಗಿದ.

ಹೈಮವತಿಯ ಮನಸು ಹಾತೊರೆಯುತ್ತಿತ್ತು—ಓಡಿ ಹೋಗಿ ತರಲನ ಎದೆಯ ಮೇಲೆ ಬಿದ್ದು, ಅವನ ಕೊರಳಿಗೆ ತಕ್ಕೈಬೀಳಬೇಕು, ಅವನ ಮಗನನ್ನು ಅವನ ಕಂಕುಳಲ್ಲಿಡಬೇಕು ಎಂದು. ಸತ್ತನೆಂದು ತಿಳಿದು ಇಷ್ಟು ದಿನ ಯಾರಿಗಾಗಿ ಶೋಕಿಸುತ್ತಿದ್ದಳೋ ಆ ಪ್ರಿಯತಮನು ಸಜೀವನಾಗಿ ಕಣ್ಣೆದುರಿಗೆ ನಿಂತಿದ್ದಾನೆ. ಮನಸಿನ ಆತುರವನ್ನು ತಡೆಯುವುದು ಅವಳಿಗಸಾಧ್ಯವಾಯಿತು. ಆದರೆ ತತ್‌ಕ್ಷಣ ತಾನು ಗೋವರ್ಧನನ ವಿವಾಹಿತ ಧರ್ಮಪತ್ನಿಯೆಂದೆನಿಸಿತು. ತರಲನನ್ನು ಕಂಡು ಹೈಮವತಿಗೆ ಆನಂದ ಆತುರತೆಗಳುಂಟಾದ ಹಾಗೆ, ಅವನ ಮುಖದಲ್ಲಿಯಾಗಲಿ ವ್ಯವಹಾರದಲ್ಲಿಯಾಗಲಿ ಅದು ಪ್ರತಿಫಲಿತವಾಗಲಿಲ್ಲ. ಹಾಗಾದರೇನು? ತರಲನು ತನ್ನನ್ನು ತ್ಯಜಿಸಿರುವನೆಂದೇ ಸಾವಿನ ಸುದ್ದಿಯ ಮರೆಯಲ್ಲಿ ಇಷ್ಟು ದಿನ ಅಡಗಿದ್ದನೆ? ಅದಕ್ಕೇ ಅವನು ತನ್ನನ್ನು ಗೊತ್ತಾದ ಹೊತ್ತಿಗೆ ಕರೆಯಲಿಕ್ಕೆ ಬರಲಿಲ್ಲವೆ? ಅಥವಾ, ಸತ್ತು ಸತ್ತು ಉಳಿದು ತಡವಾಗಿ ತಿರುಗಿ ಬಂದು, ತಾನು ಗೋವರ್ಧನನೊಂದಿಗೆ ಹೊರಟುಬಂದು ಅವನನ್ನು ಮಾಡಿಕೊಂಡನೆಂ[illegible]ನ್ನರಿ[illegible], ನನ್ನ ಚಾಂಚಲ್ಯಕ್ಕೆ ಹೇಸಿಕೆಪಟ್ಟು, ದುಃಖದಿಂದ [illegible]ನ್ನನ್ನು ಹುಡುಕದೆ ಬಿಟ್ಟನೆ? ಈಗ ಕಣ್ಣೆದುರು ಕಂಡೂ ವಿಮುಖನಾಗಿ ವಿರಾಗವನ್ನು ತೋರಿಸುತ್ತಿರುವನೆ? ಅವನು ಈಹೊತ್ತು ತಮ್ಮ ಮನೆಯ ಎದುರಿನಲ್ಲಿ ಬಂದು ನಿಂತುದು, ಏನು ಆಕಸ್ಮಾತ್ತೋ ಇಲ್ಲವೆ ಸ್ವೇಚ್ಛೆಯಿಂದಲೊ? —ಒಂದು ನಿಮಿಷದಲ್ಲಿ ಹಲವಾರು ಪ್ರಶ್ನೆಗಳು ಹೈಮವತಿಯ ಮನದೆದುರಿನಲ್ಲಿ ಎದ್ದು ನಿಂತವು.

ಇನ್ನೂ ಕೆಲ ಜನರು ತರಲನೊಂದಿಗೆ ಆ ಸ್ಥಳದಲ್ಲಿ ನಿಂತಿದ್ದರು. ಸುಂದರ ತರುಣಿಯಾದ ಹೈಮವತಿಯ ಆಕುಲತೆಯನ್ನೂ ತರಲನ ಉದಾ-

ಶೀನತೆಯನ್ನೂ ಅವರು ಕೌತುಕದಿಂದ ನೋಡುತ್ತಲಿದ್ದರು. ಆ ವಿಕಟ ಹಾಸ್ಯದ ವೃಷ್ಟಿಗಳ ಕಡೆ ಹೈಮವತಿಯ ಲಕ್ಷ್ಯವೇ ಇರಲಿಲ್ಲ. ತರಲನನ್ನು ನೋಟದಿಂದಪ್ಪಿ ಕಣ್ಣೆವೆಗಳಲ್ಲಿ ಸೆರೆಹಿಡಿಯಲೆಂಬಂತೆ ತನ್ಮಯತೆಯಿಂದ ನೋಡುತ್ತಲಿದ್ದಳು. ಆವನ ವಿರಕ್ತವಾದ ಮನಸು ಮಾತ್ರ ಅವಳನ್ನು ಕಂಡು ಉಲ್ಲಾಸಗೊಳ್ಳಲಿಲ್ಲ, ಅವಳ ಕರೆಯಿಂದ ವಿಶೇಷವಾಗಿ ವಿಚಲಿತವಾಗಲಿಲ್ಲ ಎಂಬುದನ್ನರಿತು ಪಥಿಕರು ತಮ್ಮ ಕುತೂಹಲಕ್ಕಾಗಿ ನಾಚಿಕೊಳ್ಳಬೇಕಾಯಿತು. ತರಲನು ಪುನಃ ಚತ್ತರಿಗೆಯನ್ನೇರಿಸಿ ಕುಟ್ಟುವ ಮಳೆಯಲ್ಲಿಯೇ ಬೀದಿಗಿಳಿದ.

ತರಲನು ತನ್ನ ಕಡೆಗೆ ಬರಲೆಂದೇ ಹೊರಟನೆಂದು ಹೈಮವತಿ ಬಗೆ-ದಳು. ಧಾವಿಸಿ ಹೋಗಿ ತಲೆವಾಗಿಲನ್ನು ತೆರೆದಳು. ಅವನು ಹಿಂದಿರುಗಿ ಹೊರಟಿದ್ದ. ಪಥಿಕರು ಹಲ್ಲು ತೆರೆದು ನಗುತ್ತಿದ್ದರು. ಹೈಮವತಿ ಅವರ ವಿದ್ರೂಪಹಾಸ್ಯಕ್ಕೆ ಬೆಲೆಗೊಡದೆ ತರಲನನ್ನು ಕರೆದಳು: “ಹೋಗಬೇಡ, ಸ್ವಲ್ಪ ಬಾ ಇಲ್ಲಿ!”

ತರಲನು ಹೊರಳಿ ನೋಡಿದ. ಹೈಮವತಿ ಬೀದಿಗಿಳಿದಿದ್ದಳು; ಮಳೆ-ಯೊಳಗೆ ತೋಯಿಸಿಕೊಳ್ಳುತ್ತಿದ್ದಳು; ಪಥಿಕರು ಕೌತುಕದಿಂದ ವಿಕಟೋಲ್ಲಾಸದಿಂದ ನೋಡುತ್ತಲಿದ್ದರು. ಅವನು ಹೈಮವತಿಯ ಮನೆಯನ್ನು ಪ್ರವೇಶಿಸಿದ. ಅವಳೂ ಒಳಗೆ ಬರುತ್ತಲೇ ಬಾಗಿಲಿಕ್ಕಿದ. ಅನ್ನಪೂರ್ಣೆ, ಅವಳನ್ನು ಕಂಡು ಮಗು ಇಬ್ಬರೂ ಓಡಿ ಬಂದು ತರಲನ ಕೈಯನ್ನು ಹಿಡಿದು ಕೂಗಾಡ ತೊಡಗಿದರು. “ಕಾಕಾ ಕಾಕಾ!”

ಹೈಮವತಿಯನ್ನು ಕಡುತರವಾಗಿ ಆಘಾತಿಸಲೆಂದು ತರಲನು ನಿಷ್ಠುರವಾಗಿ ಪ್ರಶ್ನಿಸಿದ: “ಇದು ನಿನ್ನ ಈ ಸಂಬಂಧದ್ದೆಂದು ಕಾಣುತ್ತದೆ?”

ಕಣ್ಣೊಳಗೆ ನೀರು ತಂದು, ಮಗುವನ್ನು ಬಗಲೊಳಗೆತ್ತಿಕೊಂಡು ಹೈಮವತಿ ಉತ್ತರವಿತ್ತಳು: “ಈತ ನಿನ್ನ ಮಗ!....”

ಮಗು ತನ್ನ ಹೊಂಬಣ್ಣದ ದುಂಡುಗಲ್ಲಗಳನ್ನು ಉಬ್ಬಿಸಿ ತಾಯಿಯ ಮಾತನ್ನು ವಿರೋಧಿಸಿತು: “ನಾನು ಇವರ ಮಗ ಅಲ್ಲ ಹೋಗು, ಅಪ್ಪನ ಮಗ!”

ಹೈಮವತಿ ಹೇಳತೊಡಗಿದಳು: “ನೀನು ಸತ್ತೆಯೆಂದು ಕೇಳಿದೆ, ನಿನ್ನ

ಸಂತಾನಕ್ಕೆ ನಾನು ತಾಯಿಯಾಗಬೇಕಾದ ಪ್ರಸಂಗ, ಅದನ್ನು ತಪ್ಪಿಸಲು ನಾನು ಹೊಂಡವನ್ನು ಬಿದ್ದು ಸಾಯಲು ಹೋಗಿದ್ದೆ; ಅನುವಿನ ತಂದೆ ನೋಡಿ ನನ್ನನ್ನು ತೆಗೆದರು...."

ಮಗು ಮತ್ತೆ ಪ್ರತಿವಾದಿಸಿತು: "ಅಕ್ಕನ ಅಪ್ಪ ಅಲ್ಲ, ನನ್ನ ಅಪ್ಪ!"

ತರಲನು ವ್ಯಂಗ್ಯಸ್ವರದಿಂದ ನಕ್ಕು ನುಡಿದ: "ಅವರು ನಿನ್ನನ್ನು ತೆಗೆದದ್ದಕ್ಕೇ ವಶಪಡಿಸಿಕೊಂಡರೆಂದು ಕಾಣುತ್ತದೆ; ಮತ್ತೆ ನೀನು ಪ್ರಾಣದಾತನಿಗೆ ಆತ್ಮಸಮರ್ಪಣೆ ಮಾಡಿದೆಯೇನೊ!"

ಅವನ ಚುಚ್ಚುಮಾತಿನಿಂದ ಹೈಮವತಿ ಸಿಟ್ಟಿಗೇಳಲಿಲ್ಲ. ತರಲನು ಬದುಕಿರುವಾಗಲೇ ಅವಳು ಇನ್ನೊಬ್ಬನನ್ನು ಮದುವೆಯಾಗಿದ್ದಾಳೆ, ಇದರಿಂದ ಅವನಿಗೆ ಸಿಟ್ಟು ಬರುವುದು ಸ್ವಾಭಾವಿಕ; ಅವಳ ಈ ಅಪರಾಧಕ್ಕೆ ತಕ್ಕ ಶಾಸ್ತಿಯಾಗುವುದು ನ್ಯಾಯಸಂಗತ; ಎಂತಲೇ ಅವಳು ಸಹಜಭಾವದಿಂದಲೇ ಉತ್ತರವಿತ್ತಳು: "ಗತ್ಯಂತರವಿಲ್ಲದ್ದಕ್ಕೆ, ನಮ್ಮೀ ಮಗನ ಜನನದ ಲಜ್ಜೆಯನ್ನು ಮುಚ್ಚುವುದಕ್ಕೆ! ನಿನ್ನ ಮಗನಿಗೆ ತಂದೆಯ ಹೆಸರನ್ನು ಕೊಡುವುದಕ್ಕಾಗಿ ಅವರು ಅತ್ಯಂತ ತ್ಯಾಗ ಮಾಡಿದ್ದಾರೆ. ಅವರು ಬರೀ ಹೆಸರಿಗೆ ನನ್ನ ಪತಿಯಾಗಿರುವೆವೆಂದು ಕಾಳಿಯ ಪಾದವನ್ನು ಮುಟ್ಟಿ ಶಪಥ ಮಾಡಿದ್ದಾರೆ. ನೀನು ವೇಳೆಗೆ ತಿರುಗಿ ಬಾರದಿರಲು, ಮುಂದೆ ನಿನ್ನ ಮರಣವಾರ್ತೆ ಬರಲು, ನಾನು ತೋರಿಕೆಗೊಬ್ಬ ಪತಿಯನ್ನು ಮಾಡಿಕೊಳ್ಳಬೇಕಾಯಿತು, ಅಷ್ಟೆ—ನಾನೀವರೆಗೂ ಸಂಪೂರ್ಣ ವಿಧವೆಯಾಗಿಯೇ ಇದ್ದು ಗರತಿತನವನ್ನು ಕಾಯ್ದುಕೊಂಡಿದ್ದೇನೆ."

ಮೊದಲು ತರಲನಿಗೆ ಗೋವರ್ಧನನ ಮಹತ್ತತೆಯ ವಿಷಯದಲ್ಲಿ ವಿಸ್ಮಯವೆನಿಸಿತು. ಬಳಿಕ ಹೈಮವತಿಯ ಅನುರಾಗದಿಂದ ಅವನ ಆಹತವಾದ ಅನುರಾಗಕ್ಕೆ ಜೀವಕಳೆ ಬಂದಿತು. ತಾನಿಷ್ಟು ದಿನ ಗೋವರ್ಧನ ಹೈಮವತಿಯರ ಬಗ್ಗೆ ತಪ್ಪು ತಿಳಿದುಕೊಂಡು ಕೆಟ್ಟ ವಿಚಾರ ಮಾಡಿದುದಕ್ಕಾಗಿ ಅವನಿಗೆ ನಾಚಿಕೆಯಾಯಿತು. "ನಾನು ಬಹಳ ಪೆಟ್ಟು ತಗಲಿ ಎರಡು ತಿಂಗಳು ಹಾಸಿಗೆಯನ್ನೇ ಹಿಡಿದಿದ್ದೆ. ಎದ್ದು ಅಡ್ಡಾಡುವಂತಾದ ಕೂಡಲೆ ನಿನ್ನನ್ನು ಹುಡುಕಿಕೊಂಡು ಹೋದೆ...."

ಮಾತನಾಡುತ್ತ ತರಲನು ಮುಂಬರಿದು ಹೈಮವತಿಯ ಕೈಯನ್ನು ಹಿಡಿಯಲು ಹೋದ. ಅವಳು ಪಕ್ಕಕ್ಕೆ ಸರಿದು ತಪ್ಪಿಸಿಕೊಂಡಳು. ಆದರೂ ಬೇಕೆಂತಲೇ ತಪ್ಪಿಸಿಕೊಂಡಳೆಂಬುದನ್ನು ತೋರಗೊಡದೆ ಹತಾಶಸ್ವರದಲ್ಲಿ ಸಹಜವಾಗಿ ಮಾತನಾಡಿದಳು: "ನೀನು ಬದುಕಿದ್ದೀ ಎಂಬ ಸುದ್ದಿಯನ್ನಾದರೂ ಕಳಿಸಿದ್ದರೆ ಈ ದುರ್ಘಟನೆ ಘಟಿಸುತ್ತಿರಲಿಲ್ಲ"

"ಹದಿನೈದು ದಿನ ನನಗೆ ಜ್ಞಾನವೇ ಇರಲಿಲ್ಲ. ಜ್ಞಾನ ಬಂದ ಬಳಿಕ ಬೇಗ ನೆಟ್ಟಗಾಗಿ ಹೋಗುತ್ತೇನೆ ಎಂದೆನಿಸಿತು."

ಅನ್ನಪೂರ್ಣೆ ನಡುವೆ ಮಾತನಾಡಿದಳು: "ಕಾಕಾ, ಒಂದು ಮಜಾ ತೋರಿಸುತ್ತೇನೆ ಬಾ; ಅವ್ವ ದಿನಾಲು ನಿನ್ನ ಚಿತ್ರಕ್ಕೆ ಹೂವೇರಿಸುತ್ತಾಳೆ, ಮತ್ತು ಅಳುತ್ತಾಳೆ."

ಮಹಾಸಮುದ್ರದ ಅತಲ ಗಹ್ವರದಲ್ಲಿ ಕಳೆದುಕೊಂಡಿದ್ದೇನೆಂದು ತಿಳಿದುಕೊಂಡಿದ್ದ ಅಮೂಲ್ಯವಾದ ರತ್ನವು ತನ್ನ ಬೊಕ್ಕಸದಲ್ಲಿಯೇ ಇರುವುದೆಂದು ತರಲನಿಗೆನಿಸಿತು. ಆಶೆ ಬಿಟ್ಟಿದ್ದ ವಸ್ತುವನ್ನು ಪುನಃ ಸಂಪಾದಿಸಿದ ಆನಂದದಿಂದ ಅವನ ಮನಸು ಉಬ್ಬಿತು. ಅವನು ಹೈಮವತಿಯ ಮುಖದ ಕಡೆ ನೋಡಿದ. ಅದು ಅರಳಿರಲೂ ಇಲ್ಲ, ಬಾಡಿರಲೂ ಇಲ್ಲ.

ತರಲನು ಅನ್ನಪೂರ್ಣೆಯೊಂದಿಗೆ ಅಟ್ಟದ ಮೇಲೆ ಹೋದ. ಹೈಮವತಿಯ ಕೋಣೆಯಲ್ಲಿ ಬಣ್ಣದಿಂದ ತೆಗೆದ ಅವನ ಭಾವಚಿತ್ರ, ಅದರ ಎದುರಿನಲ್ಲಿ ಪೂಜಾಸಾಹಿತ್ಯ. ಇಷ್ಟು ದಿನ ವಿಯೋಗವೇದನೆಯನ್ನು ಸಹಿಸಿದುದಕ್ಕೆ ಈ ತೆರದ ಪುರಸ್ಕಾರ ದೊರೆತುದಕ್ಕಾಗಿ ಅವನು ನಿರತಿಶಯ ಆನಂದದಿಂದ ಉಬ್ಬಿಹೋದ. ಈ ವಿಚ್ಛೇದವು ಘಟಿಸದಿದ್ದಿದ್ದರೆ ಹೈಮವತಿಯ ಪ್ರೇಮದ ಪ್ರಮಾಣವನ್ನು ಅವನು ಕಾಣುವುದು ಅಸಂಭವವಾಗಿತ್ತು.

"ಈ ಚಿತ್ರ ನಿನಗೆಲ್ಲಿ ಸಿಕ್ಕಿತು ಹೈಮ? ನನ್ನ ಚಿತ್ರವಾವುದೂ ನಿನ್ನ ಹತ್ತಿರವಿರಲಿಲ್ಲವಲ್ಲ?" ಹರ್ಷಗದ್ಗದ ಸ್ವರದಲ್ಲಿ ತರಲನು ಪ್ರಶ್ನಿಸಿದ.

"ಇವರೇ ತೆಗೆದುಕೊಟ್ಟದ್ದು." ಸ್ಮಿತಹಾಸ್ಯದೊಡನೆ ಮೃದುಸ್ವರದಲ್ಲಿ ಹೈಮವತಿ ಹೇಳಿದಳು. ಲಜ್ಜೆ ಅವಳ ಮೊಗವನ್ನು ಬಾಗಿಸಿತ್ತು.

ಗೋವರ್ಧನನ ಉದಾರ ಅಂತಃಕರಣವನ್ನು ಕಂಡು ತರಲನು ಶ್ರದ್ಧೆ ಗೌರವಗಳಿಂದ ಪುಲಕಿತನಾದ.

ಬಳಿಕ ಸುದೀರ್ಘವಾದ ವಿಯೋಗದ ಕತೆಯನ್ನು ಹೇಳುವುದು-ಕೇಳುವುದರಲ್ಲಿ, ಮಳೆಗಾಲದ ಮಂಕಾಳವಾದ ಹಗಲು ಯಾವಾಗ ವೇಷವನ್ನು ಬದಲಿಸಿ ಸಂಜೆಯಲ್ಲಿ ಪರಿಣತವಾಯಿತೋ ಒಬ್ಬರೂ ಅರಿಯರು. ದಾಸಿ ಬಂದು ದೀವಿಗೆಯನ್ನು ಹಚ್ಚಿಟ್ಟಾಗ ತರಲನ ಮೈಮರೆವು ಹರಿಯಿತು. "ಭಾಸ್ವರ ಮಹಾಶಯರು ಇನ್ನೂ ಬರಲಿಲ್ಲ; ನಾನೀಗ ಹೋಗುತ್ತೇನೆ; ಮತ್ತೆ ನಾಳೆ ಬರುತ್ತೇನೆ," ಎಂದ.

ತರಲನು ಈ ಮೊದಲು ಗೋವರ್ಧನನನ್ನು ಮೂರು ತೆರನಾಗಿ ಸಂಬೋಧಿಸುತ್ತಿದ್ದ. ಅವನೆದುರಿನಲ್ಲಿ 'ಭಾಸ್ಕರ' ಎಂದು, ಮಂದಿಯೊಡನೆ ಮಾತನಾಡುವಾಗ 'ಗೋವರ್ಧನ' ಎಂದು, ಹೈಮವತಿಯ ಸಂಗಾತ ಮಾತನಾಡುವಾಗ— ಅವಳ ಮನಸನ್ನು ಅವನಿಂದ ವಿಮುಖಗೊಳಿಸುವ ಉದ್ದೇಶದಿಂದ — ತುಚ್ಛಭಾವನೆಯಿಂದ 'ಗೋಬರಾ' ಎಂದು ಈಗ, ಅವನ ಉದಾರ ಚರಿತೆಯನ್ನು ಅರಿತ ಬಳಿಕ, ಹೈಮವತಿಯ ಎದುರಿನಲ್ಲಿ ಅವಳ ಪತಿಯನ್ನು ತಿರಸ್ಕಾರದಿಂದ ಸಂಬೋಧಿಸುವುದು ಅಸಾಧ್ಯ; 'ಭಾಸ್ಕರ ಮಹಾಶಯ' ಎಂದು ಗೌರವಯುಕ್ತವಾಗಿ ಮಾತನಾಡಿದ.

## ೨೬

ಅಂದು ಗೋವರ್ಧನನು ಬಹಳ ರಾತ್ರಿ ಮಾಡಿ ಮನೆಗೆ ಬಂದ. ಅಟ್ಟದ ಮೇಲೆ ಹೋಗಿ ಕೂಗಿದ: "ಎಲ್ಲಿದ್ದೀ ಲಕ್ಷ್ಮೀ? ಈ ದಿನ ನಿನ್ನ ಚಿತ್ರ ನನ್ನ ಚಿತ್ರವನ್ನು ಹಿಂದೆ ಹಾಕಿತು. ನಿನ್ನದಕ್ಕೆ ನೂರೈವತ್ತು ರೂಪಾಯಿ ಬೆಲೆ ಬಂದಿತು; ನನ್ನದಕ್ಕೆ ಬರಿ ಐವತ್ತು ರೂಪಾಯಿ."

ಪರರ ಮುಂದೆ ತಮ್ಮ ಸೋಲನ್ನು ಆನಂದದಿಂದ ಯಾರಾದರೂ ಆಡಿಕೊಳ್ಳುವುದುಂಟೆ? ಎಂದೆನಿಸಿತು ಹೈಮವತಿಗೆ. ಲಗುಬಗೆಯಿಂದ ಸೆರಗನ್ನು

ಸಂವರಿಸಿಕೊಂಡು ಆ ಸದಾನಂದನನ್ನು ನಗುಮೊಗದಿಂದ ಬರಮಾಡಿಕೊಳ್ಳಲು ಎದ್ದು ನಿಂತಳು.

ಆಭರಣಗಳ ಗಿಲಿಗಿಲಿ ಸದ್ದನ್ನು ಕೇಳಿ ಗೋವರ್ಧನನು ಬೆಪ್ಪಾಗಿ ಹೈಮವತಿಯ ಕೋಣೆಯ ಹೊರಗೇ ನಿಂತುಬಿಟ್ಟ. ಒಳಗೆ ನೆರೆಮನೆಯ ವಧು ಯಾರಾದರೂ ಬಂದಿರುವರೋ ಏನೋ, ತಾನು ಪ್ರವೇಶಿಸುವುದು ಅನುಚಿತ ವಾದೀತೇನೋ ಎಂದು ಅವನಿಗೆನಿಸಿತು.

“ ಅಪ್ಪಾ ಅಪ್ಪಾ, ನೋಡು ಬಾ, ಈವೊತ್ತು ಅವ್ವ ಹೇಗೆ ವೇಷ ಹಾಕಿದ್ದಾಳೆ!” ಒಳಗಿನಿಂದ ಓಡಿ ಬಂದು ಅನ್ನಪೂರ್ಣೆ ಅರುಹಿದಳು.

ಗೋವರ್ಧನನು ಒಳಗೆ ಹೋಗಿ ಸ್ತಂಭಿತನಾಗಿ ಅವಾಕ್ಕಾಗಿ ಆನಂದದಿಂದ ನೋಡುತ್ತ ನಿಂತ. ಹೈಮವತಿ ಮೈತುಂಬ ವಸ್ತ್ರ ಇಟ್ಟಿದ್ದಾಳೆ, ಅಡಿ-ಗಳಿಗೆ ಅಲತಿಗೆಯ ರಸವನ್ನು ತೊಡೆದಿದ್ದಾಳೆ, ಅಗಲಂಚಿನ ಸೀರೆಯನ್ನು ಉಟ್ಟಿದ್ದಾಳೆ. ಇಷ್ಟು ಕಾಲದ ತರುವಾಯ ಇಂದು ಅವರ ವಿವಾಹವಾಸರವೆ? ಹೈಮವತಿಯ ಶೂನ್ಯ ಹೃದಯದಲ್ಲಿ ಅನುರಾಗದ ಮೇಘಮಲ್ಹಾರವು ಇಂದು ನವಿಲನ್ನು ಕುಣಿಸುತ್ತಿರುವುದೆ? ಅಲ್ಲಿ ಅಪ್ಸರೆಯರು ಕಾಮನ ಬಿಲ್ಲಿನ ವೀಣೆಯಲ್ಲಿ ಮಿಲನರಾಗಿಣಿಯನ್ನು ಇಂದು ಬಾಜಿಸುತ್ತಿರುವರೆ? ವಿರಹಿಣಿಯಾದ ಯಕ್ಷಪ್ರಿಯೆಯ ಮಣಿಹರ್ಮ್ಯದ ವಾತಾಯನದಲ್ಲಿ ಯಕ್ಷನ ಮೇಘದೂತನು ಪ್ರಿಯನ ಸುದ್ದಿಯನ್ನು ಇಂದು ಅರುಹಿ ಹೋದನೆ?

ಚಿತ್ರದ ಮಾರಾಟದ ಸಾಮಾನ್ಯವಾದ ಸುದ್ದಿಯನ್ನು ಹೇಳಿ, ಹೈಮ-ವತಿಗೆ ಅತ್ಯಲ್ಪ ಆನಂದವನ್ನು ತಾನು ನೀಡಬಂದರೆ, ಅವಳು ತನಗಾಗಿ ವಿರಾಟ್ ಆನಂದದ ಹಿರಿದಾದ ಕಾಣಿಕೆಯನ್ನು ಅಣಿಮಾಡಿ ಇಟ್ಟಿದ್ದಾಳೆ. ಅವಳ ಸಾನಂದ ಸೌಂದರ್ಯವನ್ನೇ ಮುಗ್ಧನಾಗಿ ನೋಡುತ್ತಿದ್ದಂತೆಯೆ, ಗೋವರ್ಧನನಿಗೆ ನೆನಪಾಯಿತು ಪ್ರತಿಜ್ಞೆ—ಹೂವಿನ ಹಾಸಿಗೆಯಲ್ಲಿ ಕಾಲಿಟ್ಟರೆ ಮುಳ್ಳು ನಟ್ಟ ಹಾಗೆ! ಇಷ್ಟು ದಿನ ಅವನು ಶಪಥವನ್ನು ಮುರಿಯಲು ಆಗಾಗ ಉದ್ಯುಕ್ತನಾಗುತ್ತಿದ್ದ; ಆ ಶಪಥವು ಬಂಧನಕಾರಕವಲ್ಲವೆಂದು ಸಿದ್ಧಪಡಿಸಲು ಎಷ್ಟೋ ಯುಕ್ತಿಗಳನ್ನು ಯೋಚಿಸುತ್ತಲಿದ್ದ; ಆಗ ಅವನನ್ನು ಲುಬ್ಧಗೊಳಿಸಿ ಶಪಥವನ್ನು ಭಂಗಿಸಲು ಸೂಚಿಸುತ್ತಿರುವಳಲ್ಲ! ಗೋವರ್ಧನನು ಹೈಮವತಿ

ಯನ್ನು ಶ್ರದ್ಧೆಯ ಮಣಿಮಂದಿರದಲ್ಲಿ ಪ್ರಸ್ಥಾಪಿಸಿ, ತನ್ನನುರಾಗದ ಅಂತರಂಗವನ್ನು ಚಂದನದಂತೆ ತೇದು ಪೂಜಿಸುತ್ತಿದ್ದ. ಅದಿಂದು ಪ್ರಬಲ ಭೂಕಂಪದಿಂದ ಕಪ್ಪರಿಸಿಕೊಂಡು ಬೀಳತೊಡಗಿತು. ಹೃದಯದಲ್ಲಿ ಸರ್ವನಾಶದ ಸಂದೇಹವುಂಟಾಗಿ ಅವನ ಮುಖವು ಒಣಗಿಹೋಯಿತು; ಅಲ್ಲಿದ್ದ ಆನಂದ-ದೀಪ್ತಿ ವಿಷಾದ ಸಮುದ್ರದಲ್ಲಿ ಅಸ್ತವಾಗತೊಡಗಿತು. ಇಷ್ಟು ದಿನ ಗೋವರ್ಧನನು ಯಾವುದಕ್ಕೆ ತನ್ನ ಆಕಾಂಕ್ಷೆಯ ಬಣ್ಣವಿತ್ತು ಲೋಭನೀಯವಾಗಿದೆಯೆಂದು ಭಾವಿಸಿಕೊಂಡಿದ್ದನೋ ಆ ದುರ್ಲಭವಾದ ಸಾಧನಾಧನವು ಬಣ್ಣದಿಂದ ತಾನು ಸುಂದರವಾಗುವ ಬದಲು ಬಣ್ಣವನ್ನೇ ಕೆಡಿಸಿ ಇದ್ದಲು ಮಾಡಿಬಿಟ್ಟಿತು! ಅವನ ಮನಸು ಅವನನ್ನೂ ಹೈಮವತಿಯನ್ನೂ ಕೂಡಿಯೇ ಜರೆಯಲಾರಂಭಿಸಿತು. ಅವನ ಮೋರೆ ಕ್ರಮಶಃ ಗಂಭೀರವೂ ಕರ್ಕಶವೂ ಆಗತೊಡಗಿತು.

ತರಲನನ್ನು ತಿರುಗಿ ಪಡೆದ ಆನಂದಾತಿಶಯದ ಭಾವಾವೇಗದಲ್ಲಿ ಮೈಮರೆತು ಹೈಮವತಿ ಮುತ್ತೈದೆಯ ವೇಷವನ್ನು ಧರಿಸಿದ್ದಳು. ಗೋವ-ರ್ಧನನ ವಿಸ್ಮಯವು ಗಾಂಭೀರ್ಯವಾಗಿ ಪರಿಣಮಿಸಿದುದನ್ನು ಕಂಡು ಅವಳು ನಾಚಿ ತಲೆ ತಗ್ಗಿಸಿ ಮಂದಸ್ಮಿತೆಯಾದಳು.

ಇಬ್ಬರೂ ಸುಮ್ಮನೆ ನಿಂತಿರುವುದನ್ನು ಕಂಡು ಅನ್ನಪೂರ್ಣೆ ಮಾತನಾಡಿದಳು: "ಅಪ್ಪಾ, ಈವೊತ್ತು ಕಾಕಾ ಬಂದಿದ್ದ."

"ಕಾಕಾ?" ಅತಿರೇಕದ ಅಚ್ಚರಿಯಿಂದ ಗೋವರ್ಧನನು ಪ್ರಶ್ನಿಸಿದ.

ಅನ್ನಪೂರ್ಣೆ ನಕ್ಕು ಅಜ್ಞಾನಿಗಳಿಗೆ ತಿಳಿಹೇಳುವ ರೀತಿಯಲ್ಲಿ ನುಡಿದಳು: "ಅವ್ವ ಪೂಜೆ ಮಾಡುತ್ತಾಳಲ್ಲ ದಿನಾ, ಆ ಚಿತ್ರದ ಕಾಕಾ."

"ಯಾರು, ತರಲನೆ? ಅವನು ಬದುಕಿದ್ದಾನೆಯೆ?" ಮತ್ತಷ್ಟು ಬೆರಗುಬಟ್ಟು ಹೈಮವತಿಯ ಕಡೆಗೆ ನೋಡಿ ಗೋವರ್ಧನನು ಕೇಳಿದ.

ಕಳೆದುಕೊಂಡ ಸಂಪದವನ್ನು ಮರಳಿ ಹೊಂದಿದ ಹರುಷದಿಂದ ಕಳೆ-ಗೊಂಡ ಕಣ್ಣುಗಳನ್ನು ಮೇಲೆತ್ತಿ ಅವನ ಕಡೆ ನೋಡಿದಳು ಹೈಮವತಿ.

ಅನ್ನಪೂರ್ಣೆ ಮತ್ತೆ ನಕ್ಕು ತಿಳಿಸಿದಳು: "ಕಾಕಾ ಸತ್ತ ಎಂದುಹೇಳಿ ನೀನು ತಿಳಿದಿದ್ದಿ ಕಾಣುತ್ತದೆ. ಆತ ಸತ್ತಿದ್ದಿಲ್ಲ; ಅವ್ವನ ಹಾಗೆ ನೆಟ್ಟಗಾಗಲಿಕ್ಕೆ

ಸ್ವರ್ಗಕ್ಕೆ ಹೋಗಿದ್ದ. ಈವೊತ್ತು ನಮ್ಮ ಮನೆಯ ಮುಂದೆ ಹಾದು ಹೋಗುತ್ತಿದ್ದ. ಅವ್ವ ನೋಡಿ ಕರೆದಳು."

ಗೋವರ್ಧನನ ಮನಸಿನ ಕತ್ತಲು ಸರಿಯಿತು. ಸ್ವಾಸ್ಥ್ಯವು ಮರಳಿ ಬಂದಿತು. ಮೊಗವು ಮತ್ತೆ ನಗೆಯನ್ನು ತಳೆಯಿತು —ಸರಿ, ಹೈಮವತಿಯ ಅಲಂಕೃತಿ ತನ್ನ ಮನಸನ್ನು ಸೆಳೆಯುವುದಕ್ಕಲ್ಲ! ಆದರೆ ಇಷ್ಟು ದಿನ ಅವಳು ತನ್ನ ಆಗ್ರಹವನ್ನು ಅಲ್ಲಗಳೆದು, ಈಗ ತರಲನನ್ನು ಕಂಡು ಮುತ್ತೈದೆಯಾದುದು ಗೋವರ್ಧನನನ್ನು ವ್ಯಥೆಗೆ ಗುರಿಮಾಡಿತು. ಆದರೂ ತರಲನು ಜೀವಿಸಿರುವನೆಂಬ ಆಕಲ್ಪಿತ ವಾರ್ತೆಯಿಂದ ಅವನಿಗಾದ ಆಘಾತದ ನೋವನ್ನು ಹೈಮವತಿಯ ಅರಳುಮೊಗದ ದರ್ಶನದ ಸೊಗಸು ಮುಚ್ಚಿತು. ಅವನೆಂದ: "ತರಲ ಬಾಬುವಿನ ದರ್ಶನ ನನಗಾಗಲಿಲ್ಲವಲ್ಲ? ತೀರಿಕೊಂಡಿರುವನೆಂದು ತಿಳಿದಿದ್ದ ಮನುಷ್ಯನನ್ನು ಕಂಡರೆ ಮನಸಿಗದೆಷ್ಟು ಆನಂದ!"

ಸತ್ತರೂ ತನಗೆ ಅಡ್ಡಿಯಾಗಿದ್ದ ಪ್ರಬಲ ಪ್ರತಿದ್ವಂದ್ವಿ ಜೀವದಿಂದಿರುವನೆಂಬುದನ್ನು ಕೇಳಿ ಗೋವರ್ಧನನಿಗಾದ ಸಂತೋಷವನ್ನು ಕಂಡು ಹೈಮವತಿ ಮುಗ್ಧಳಾದಳು ಅವಳೆಂದಳು: "ಅವರು ನಿಮ್ಮನ್ನು ಕಾಣಬೇಕೆಂದು ಬಹಳ ಹೊತ್ತು ಹಾದಿ ನೋಡಿ, ಹೊತ್ತು ಮುಳುಗಿದ ಮೇಲೆ ಹೋದರು. ನಾಳೆ ಮತ್ತೆ ಬರುತ್ತಾರೆ."

ತರಲನು ಹೈಮವತಿಗೆ 'ಅವರು!' ಆ ಶಬ್ದ ಗೋವರ್ಧನನ ಮನಸಿಗೆ ತಾಗಿತು. – ಅವನು ಹೈಮವತಿಯೊಂದಿಗೆ ಬಹಳ ಹೊತ್ತಿದ್ದು ಹೋದ; ಮತ್ತೆ ಬರುತ್ತಾನೆ ನಾಳೆ! ಇವಳು ಹೆಸರಿಗೆ ತನ್ನ ಹೆಂಡತಿ, ತರಲನ ಮಗನ ತಾಯಿ. ಅವನು ತನ್ನ ಪುತ್ರನ ಜನನಿಯಲ್ಲಿ ಆಸಕ್ತನಾಗಿ ಪ್ರತ್ಯಹವೂ ಬರುತ್ತಾನೆ, ತಾನು ಮಾತ್ರ ಹೆರವರ ಮಗನ ತಂದೆಯಾಗಿ, ಪರನಾರಿಯ ಸುಳ್ಳು ಗಂಡನಾಗಿ, ಇಬ್ಬರ ಮಧ್ಯದಲ್ಲಿ ಅಸ್ತಿತ್ವವಿಲ್ಲದೆ ವ್ಯರ್ಥವಾಗಿ ಬಿದ್ದುಕೊಂಡಿರಬೇಕು! ತಾನಿಲ್ಲಿ ಇರುವುದಾದರೂ ಎಂತು? ಮದುವೆಮಾಡಿಕೊಂಡ ಹೆಂಡತಿಯನ್ನು ಬಿಟ್ಟುಹೋಗುವುದು ಹೇಗೆ ?—ಇತ್ಯಾದಿ ಜಟಿಲವಾದ ಯೋಚನೆಗಳಿಂದ ಗೋವರ್ಧನನ ಮೋರೆ ಗಂಭೀರವಾಗುತ್ತ ವಿವರ್ಣವಾಗತೊಡಗಿತು. ಓಡಿಹೋಗುತ್ತಲಿದ್ದ ನಗುವನ್ನು ಮುಖದಲ್ಲಿ ಹಿಡಿದುನಿಲ್ಲಿಸಿ ಅವನೆಂದ: "ತರಲ-

ಬಾಬು ಎಲ್ಲಿರುತ್ತಾರೆಂದು ಗೊತ್ತಾದರೆ ನಾನೇ ಹೋಗಿ ನೋಡಿಕೊಂಡು ಬರುತ್ತೇನೆ."

ತರಲನನ್ನು ಕಾಣುವುದಕ್ಕಾಗಿ ಈ ರಾತ್ರಿಯಲ್ಲಿಯೇ, ಸುರಿಯುವ ಮಳೆಯಲ್ಲಿಯೇ ಹೋಗಲು ಗೋವರ್ಧನನು ಉತ್ಸುಕನಾಗಿರುವನೆಂದು ಹೈಮವತಿ ತಿಳಿದುಕೊಂಡಳು. ಮನಸ್ಸಿಗೆ ಒಳ್ಳೆಯ ಸೊಗಸೆನಿಸಿ ಅವಳು ಹೇಳಿದಳು: "ಅವರಿರುವ ಸ್ಥಳವನ್ನು ಕೇಳುವುದು ನನಗೆ ಮರೆತೇಹೋಯಿತು. ರಾತ್ರಿ ಮಳೆಯೊಳಗೆ ಹೋಗುವಿರಾದರೂ ಎಲ್ಲಿ? ನಾಳೆ ಅವರು ಬಂದೇ ಬರುತ್ತಾರೆ."

ಅವನು ಇರುವುದೆಲ್ಲೆಂದು ವಿಚಾರಿಸುವುದಕ್ಕೂ ಆಗದಷ್ಟು ಹೈಮವತಿ ತನ್ಮಯಳಾಗಿದ್ದುದು, ನಾಳೆ ಅವನು ತಪ್ಪದೆ ಬರುತ್ತಾನೆಂಬುದು ನಿಃಸಂದೇಹವಾಗಿದ್ದುದು ಗೋವರ್ಧನನನ್ನು ಅಪ್ರಸನ್ನಗೊಳಿಸಿದವು. ಆದರೂ ನಕ್ಕು ಮಾತನಾಡಿದ: "ಆಗಲಿ ಏನು ಮಾಡುವುದು?"

ಚಿತ್ರಗಳ ಮಾರಾಟದಿಂದ ಬಂದ ಹಣವನ್ನು ಹೈಮವತಿಯ ಕೈಗೆ ಕೊಡುತ್ತ ಅವನೆಂದ: "ಇದನ್ನು ತೆಗೆದಿಡು; ಈ ಸಲದ ಚಿತ್ರಗಳಿಂದ ತಿಳಿಯುವುದು, ಯಾರು ಗೆಲ್ಲುವರೋ ಯಾರು ಸೋಲುವರೋ."

ಹೈಮವತಿ ಹಣವನ್ನು ಇಸಿದುಕೊಂಡಳು. ಗೋವರ್ಧನನ ಬೆರಳು ಅವಳ ಕೈಯನ್ನು ಸೋಕಲು ವ್ಯಗ್ರವಾಗಿ ಹಾತೊರೆಯಲಿಲ್ಲ. ನೂತನ ಆನಂದ-ಜಲದಲ್ಲಿ ಈಸಾಡುತ್ತಿದ್ದ ಅವಳಿಗೆ ಯಾವುದೂ ಲಕ್ಷ್ಯವಿಲ್ಲ. ಅವಳು ನಸುನಕ್ಕಳು ಮಾತ್ರ. 'ಹೈಮವತಿ ಚಿತ್ರ ತೆಗೆಯುವುದು ಇಲ್ಲಿಗೆ ಮುಗಿತಾಯಗೊಂಡಂತಾಯಿತು, ಅವಳ ಸಮಸ್ತ ಸಮಯವನ್ನೂ ಎಲ್ಲ ಯೋಚನೆಗಳನ್ನೂ ತರಲನು ಆಕ್ರಮಿಸಿಕೊಳ್ಳುವನಿನ್ನು' ಎಂದು ಅವನೆಂದುಕೊಂಡ.

## ೧೭

ತರಲನು ಹೈಮವತಿಯ ಕಡೆ ನಿತ್ಯವೂ ಬರತೊಡಗಿದ. ಬರುವುದು ಗೋವರ್ಧನನು ಶಾಲೆಗೆ ಹೋದ ಮೇಲೆ, ತೆರಳುವುದು ಅವನು ಮನೆಗೆ ಮರಳುವುದರೊಳಗೆ. ಇಚ್ಛೆಯಿಂದಲೇ ಆಗಲಿ ಅನಿಚ್ಛೆಯಿಂದಲೇ ಆಗಲಿ, ತನ್ನ ಪ್ರಿಯತಮೆಯನ್ನು ವಶಪಡಿಸಿಕೊಂಡಿದ್ದ ಗೋವರ್ಧನನನ್ನು ಕಾಣಲು ತರಲನಿಗೆ

ಸಂಕೋಚವೆನಿಸುತ್ತಿತ್ತು, ವಿರಸವೆನಿಸುತ್ತಿತ್ತು. ಆದುದರಿಂದ ಶಕ್ಯವಿದ್ದಷ್ಟು ಅವನ ದರುಶನವನ್ನು ತಪ್ಪಿಸುತ್ತಿದ್ದ. ಆದರೆ ಹೈಮವತಿಯ ಎದುರಿಗೆ ಹೋದಾಗ ತನ್ನ ಚಾತುರ್ಯದ ನಡೆವಳಿಕೆಗಾಗಿ ತನಗೇ ನಾಚಿಕೆಯಾಗು-ತ್ತಿತ್ತು. ಆಗವನು ಕೇಳುತ್ತಿದ್ದ: 'ಭಾಸ್ಕರಮಹಾಶಯರೆಲ್ಲಿ?' ಇದಕ್ಕೆ ಹೈಮವತಿಯ ಉತ್ತರ ಗೊತ್ತಿದ್ದುದೇ. 'ಇಂದೂ ಅವರ ದರ್ಶನವಾಗಲಿಲ್ಲ' ಎನ್ನು-ತ್ತಿದ್ದ ತರಲ. ಇಳಿಹೊತ್ತಾಗುತ್ತಲೇ ಒಂದಿಲ್ಲೊಂದು ಕೆಲಸದ ನೆವವನ್ನು ಮುಂದೆ ಮಾಡಿ ಹೊರಟುಹೋಗುತ್ತಿದ್ದ. ಗೋವರ್ಧನನನ್ನು ಶಿಖಂಡಿಯಂತೆ ಮರೆಯಾಗಿಟ್ಟು ತಾವಿಬ್ಬರೂ ಹಾಗೆಯೆ ದಾಂಪತ್ಯಸುಖದಲ್ಲಿ ಬಾಳುವೆ ಸಾಗಿಸಬೇಕು ಎಂದೊಮ್ಮೊಮ್ಮೆ ತರಲನು ಆಲೋಚಿಸುತ್ತಿದ್ದ. ಹೈಮವತಿಯ ಎದುರಿನಲ್ಲಿ ಈ ಪ್ರಸ್ತಾಪವನ್ನೆತ್ತಲು ಧೈರ್ಯವಾಗುತ್ತಿರಲಿಲ್ಲ ಅದಕ್ಕೆ ಎರಡು ಕಾರಣಗಳಿದ್ದವು. ಈ ಮನೆಯ ಯಜಮಾನನಾದ ಗೋವರ್ಧನ ಅವಳ ಗಂಡ-ನೆಂಬುದೊಂದು; ಅವಳಿಗೆ ಅವನಲ್ಲಿ ಶ್ರದ್ಧೆಯಿದೆ, ಭಕ್ತಿಯಿದೆ, ಪ್ರೇಮವೂ ಇರಬಹುದೆಂದು ಅವಳ ನಡೆನುಡಿಗಳಿಂದ ಚೆನ್ನಾಗಿ ತಿಳಿದುಬಂದಿರುವುದಿ-ನ್ನೊಂದು. ಆದರೆ ಗೋವರ್ಧನನ ಆ ಆತಂಕವು ಅನಧಿಕಾರ ಉಪದ್ರವ-ವೆಂದು ತರಲನ ಎಣಿಕೆ. ಹೈಮವತಿ ಗೋವರ್ಧನನನ್ನು ಪ್ರೀತಿಸುವಳೆಂಬ ಭಾವನೆ ಅವನನ್ನು ಹುಚ್ಚನನ್ನಾಗಿ ಮಾಡುತ್ತಿತ್ತು. ಗೋವರ್ಧನನು ಶಪಥಪೂರ್ವಕವಾಗಿ ದಾಂಪತ್ಯದ ಅಧಿಕಾರವನ್ನು ತ್ಯಜಿಸಿಬಿಟ್ಟಿರುವನೆಂದಮೇಲೆ ಅವನಿಂದಾಗಲಿ, ಹೈಮವತಿ ಇಷ್ಟುದಿನವೂ ತನ್ನನ್ನೇ ಪತಿಯೆಂದು ದೃಢವಾಗಿ ನಂಬಿಕೊಂಡಿರುವಳೆಂದ ಮೇಲೆ ಅವಳಿಂದಾಗಲಿ, ಯಾರಿಂದಲೂ ತನ್ನ ಸೊತ್ತನ್ನು ತಾನು ಅನುಭವಿಸುವುದರಲ್ಲಿ ಅಡ್ಡಿಯಿರಲಾರದೆಂದು ತರಲನು ತಿಳಿದಿದ್ದ. ಆದರೂ ಬಾಯಿಬಿಟ್ಟು ಹೇಳುವ ಧೈರ್ಯ ಅವನಿಗಿರಲಿಲ್ಲ.

ತರಲನು ಬೇಕೆಂತಲೇ ಗೋವರ್ಧನನನ್ನು ತಪ್ಪಿಸಿ ಬರುತ್ತಿರುವನೆಂಬುದನ್ನು ಎರಡು ದಿನಗಳಲ್ಲಿಯೇ ಅನುಚಿತ ವಿಷಯದ ಹೊಯ್ದಾಟ ನಡೆದಿದೆ, ಅದನ್ನು ಪ್ರಕಟಗೊಳಿಸುವ ಇಚ್ಛೆ ಅವನಿಗಿದ್ದರೂ ಸಾಹಸ ಸಾಲದಾಗಿದೆ; ಎಂತಲೇ ಅವನ ದೃಷ್ಟಿ ಚಂಚಲವಾಗಿರುವುದು, ಮುಖಭಾವ ಕುಂಠಿತವಾಗಿರುವುದು, ಮಾತು ಎಬಡತಬಡ ಆಗುತ್ತಿರುವುದು, ಮೇಲಿಂದಮೇಲೆ ಅವನು ಅನ್ಯಮನಸ್ಕನಾಗುತ್ತಿದ್ದಾನೆ ಎಂದೂ ತಿಳಿದುಕೊಂಡಳು.

ಶನಿವಾರ ದಿನ ಕಲಾಶಾಲೆಗೆ ಬಿಡುವೆಂಬುದನ್ನು ತರಲನು ಅರಿಯ. ಅವನು ಅಂದೂ ಬರುವಂತೆಯೆ ಬಂದ ಹೈಮವತಿ ಗೋವರ್ಧನನ ಕೋಣೆಯ ಕಡೆ ಬೆರಳು ತೋರಿಸಿ, "ಅವರು ಆ ಕೋಣೆಯೊಳಗೆ ಇರುತ್ತಾರೆ, ಭೆಟ್ಟಿಯಾಗಿ ಬಾ," ಎಂದು ಹೇಳಿದಳು.

ತರಲನಿಗೆ ದಿಕ್ಕು ತೋಚದಂತಾಯಿತು. ಓಡಿ ಹೋಗಲು ಮಾರ್ಗ ವಿರಲಿಲ್ಲ. ಅವನು ಹತಾಶಕಾತರವಾದ ಕರುಣದೃಷ್ಟಿಯಿಂದ ಹೈಮವತಿಯ ಕಡೆಗೆ ನೋಡಿ,—ಸಾಕಿದ ಪ್ರಾಣಿಯನ್ನು ಕೊಲ್ಲಲೆಂದು ಪೆಟ್ಟು ಹಾಕಿದಾಗ ಅದು ತನ್ನ ಪ್ರೀತಿಯ ಒಡೆಯನ ಮುಖವನ್ನು ನೋಡುವಂತೆ—ಗೋವರ್ಧನನ ಕೋಣೆಗೆ ಹೋದ. ಗೋವರ್ಧನನನ್ನು ಕಾಣುವುದಕ್ಕೆ ಇವನಿಷ್ಟು ಭಯಪಡುವುದು, ಸಂಕೋಚಪಟ್ಟುಕೊಳ್ಳುವುದು ಕೃತಘ್ನತೆಯೆಂದು ಹೈಮವತಿಗೆನಿಸಿತು. ಗೋವರ್ಧನನ ಕಣ್ಣು ತಪ್ಪಿಸಿ ಇವನು ತನ್ನೊಡನೆ ಸಂಬಂಧ ವನ್ನು ಬೆಳೆಯಿಸಲು ಹವಣಿಸುತ್ತಿರುವನೆಂಬುದನ್ನು ನೆನೆದು ಅವಳು ಭೀತಿಗೊಂಡಳು.

ಪ್ರತಿದಿನವೂ ತರಲನು ಹೈಮವತಿಯ ಕಡೆಗೆ ಬರುತ್ತಿದ್ದಾನೆ, ಆದರೂ ತನಗೆ ಭೆಟ್ಟಿಯಾಗಲೊಲ್ಲನೆಂದು ಗೋವರ್ಧನನ ಮನಸು ಉದ್ವಿಗ್ನವಾಗುತ್ತಲಿತ್ತು. ನಿಜವಾಗಿ ಹೈಮವತಿ ತರಲನ ಹೆಂಡತಿಯೇ, ಅವನೇ ತನ್ನ ಗಂಡನೆಂದು ಅವಳೂ ದೃಢವಾಗಿ ನಂಬಿಕೊಂಡಿದ್ದಾಳೆ, ಅವಳು ಅವನನ್ನೇ ಪ್ರೀತಿಸುವಳೆಂಬುದು ನಾನಾ ರೀತಿಗಳಿಂದ ಸೂಚಿತವಾಗಿದೆ, ತಾನು ದೈವಗತಿಯಿಂದ ಅವರಿಬ್ಬರ ನಡುವೆ ಬಂದು ಬಿದ್ದವನು—ಇದೆಲ್ಲವೂ ನಿಜವೆ ಆದರೆ ತಾನು ಹೈಮವತಿಯನ್ನು ಶಾಸ್ತ್ರೋಕ್ತವಾಗಿಯೂ ಶಾಸನೋಕ್ತವಾಗಿಯೂ ವಿವಾಹವಾಗಿದ್ದೇನೆ, ಅವಳು ತನ್ನ ಧರ್ಮಪತ್ನಿ ಎಂಬುದೂ ಅಷ್ಟೇ ಸತ್ಯ ಈ ಸಮಸ್ಯೆಯಲ್ಲಿ ತಾನು ಮಾಡತಕ್ಕುದೇನು? ಹೈಮವತಿ ತನ್ನನ್ನು ಮದುವೆಯಾಗಲೊಪ್ಪಿದುದು ಬರೀ ತೋರಿಕೆಗಾಗಿ ಅಷ್ಟೆ, ಬೇರೆ ಯಾವ ಸಂಬಂಧದಿಂದಲೂ ಅಲ್ಲ. ಅವಳು ತರಲನ ಪ್ರೇಮದ ಕಟ್ಟಿನಲ್ಲಿ ಸಿಲುಕಿದವಳು, ಅವರಿಬ್ಬರ ಪ್ರಾಣಗಳೂ ಮಿಲನದ ಸೆಳೆತದಿಂದ ವ್ಯಾಕುಲವಾದುವು, ಈಗವರ ಹಿಂದಿನ ನಂಟು ಮತ್ತೆ ನೆಲೆಗೊಳ್ಳುವುದಾದರೆ ತಾನದಕ್ಕೆ ತಡೆಯೊಡ್ಡುವುದು ಒಪ್ಪೋ ತಪ್ಪೋ? ಹೈಮವತಿಯ ಮೇಲಿನ ಗೋವರ್ಧನನ ಅಧಿಕಾರವು ನ್ಯಾಯ್ಯವಾದ

ಕಟ್ಟುಕತೆ. ಅಥವಾ ಮಿಥ್ಯಾವಮಾಯೆ ಮಾತ್ರವಾಗಿದ್ದರೂ ಅದು ಅಧಿಕಾರವೇ. ಮನುಷ್ಯನು ತನ್ನ ಸಾಮಾನ್ಯ ಕ್ಷುದ್ರ ಅಧಿಕಾರವನ್ನೂ ಬಿಟ್ಟುಕೊಡಲು ಒಪ್ಪುವುದಿಲ್ಲ. ಹೊಲ ಹಲವು ವರುಷಗಳಿಂದ ಬೀಳುಬಿದ್ದಿರಲೊಲ್ಲದೇಕೆ, ಚಿಂತೆಯಿಲ್ಲ; ಆದರೆ ಅದರ ಒಂದಡಿ ತುಂಡನ್ನು ಬೇರೊಬ್ಬನು ಸಾಧಿಸಿದರೆ ತೀರಿತು, ಹೊಲದೊಡೆಯನ ಅಧಿಕಾರಪ್ರವೃತ್ತಿ ಎಚ್ಚತ್ತು ಏಳುವುದು ನಿಷ್ಫಲವಾದ ನೆಲದ ತುಂಡಿಗಾಗಿ ಅವನು ಸರ್ವಸ್ವವನ್ನೂ ಪಣಕ್ಕಿಟ್ಟು ಜಗಳವಾಡುವನು. ಇದಂತೂ ಮನುಷ್ಯನ ಮೇಲೆ ಮನುಷ್ಯನ, ಹೃದಯದ ಮೇಲೆ ಹೃದಯದ ಅಧಿಕಾರದ ಪ್ರಶ್ನೆ ತನ್ನ ಹೆಂಡತಿಯೆಂದು ಪರಿಚಿತೆಯಾದ ಸ್ವೀಕೃತೆಯಾದ ಹೆಂಗುಸು ತನ್ನ ಕಣ್ಣೆದುರಿಗೇ ಹೆರವನ ಹೆಂಡತಿಯಾಗಿರುವುದು, ಅದನ್ನು ನೋಡಿಯೂ ನೋಡದವನಂತೆ ನೀರವವಾಗಿ ಹಸನ್ಮುಖದಿಂದ ಸುಮ್ಮನಿದ್ದು ಬಿಡುವುದೆಂದರೆ ಅಸಹನೀಯ. ಸಹಿಸದಿದ್ದರೆ ಬೇರೆ ಉಪಾಯವೇನು? ಹೈಮವತಿಗೆ ಏನಾದರೂ ಹೇಳಲಿಕ್ಕೆ ಹೋದರೆ ಅವಳೇನೆಂದುಕೊಂಡಾಳು? ತನ್ನ ವಿಷಯದಲ್ಲಿ ಸಂದೇಹಪಟ್ಟುದಕ್ಕೆ ಅವಳು ವ್ಯಥೆಗೊಂಡರೆ? ತನ್ನೊಡನೆ ಹೇಗೋ ತರಲನೊಡನೆಯೂ ಹಾಗೆಯೆ ಕೇವಲ ಮಿತ್ರತ್ವದ ಸಂಬಂಧವನ್ನು ಇಟ್ಟುಕೊಳ್ಳಬೇಕೆಂದು ಅವಳು ಸಂಕಲ್ಪಿಸಿದ್ದರೆ? ಸಂಶಯಪಡುವುದರಿಂದ ಅವಳಿಗೆ ದುಃಖವಾಗದೆ? ಆದರೆ ತನ್ನ ಕಡೆ ಅವಳ ಪ್ರೇಮದ ಸೆಳೆತವಿಲ್ಲದುದರಿಂದ ತನ್ನೊಂದಿಗೆ ಆರೀತಿ ಇರುವುದು ಅವಳಿಗೆ ಕಷ್ಟವಾಗಲಿಲ್ಲ ತರಲನೊಂದಿಗೆ ಈರೀತಿ ಇರುವುದು ಶಕ್ಯವೆ?

ಗೋವರ್ಧನನ ಮನಸು ಹೀಗೆ ಉದ್ವಿಗ್ನವಾಗಿರುತ್ತಿದ್ದುದರಿಂದಲೇ ಅವನು ಮನೆಗೆ ಬಂದ ಬಳಿಕ 'ತರಲನು ಬಂದಿದ್ದನೆ?' ಎಂದು ತಾನಾಗಿ ವಿಚಾರಿಸುತ್ತಿರಲಿಲ್ಲ. ಅವನ ಬಗ್ಗೆ ಮಾತು ಹೊರಟರೆ ಬೇರೆ ವಿಷಯವನ್ನೆತ್ತುತ್ತಿದ್ದ ತಾನು ಸಂಶಯಪಡುತ್ತಿದ್ದೇನೆಂದು ಹೈಮವತಿ ತಿಳಿದುಕೊಂಡಾಳು, ತನ್ನ ಮನಸಿನ ಅವಿಶ್ವಾಸ-ಉದ್ವೇಗ-ವಿರಕ್ತಿಗಳು ಮಾತಿನಲ್ಲಿ ಹಣಿಕಿಹಾಕಿಯಾವು ಎಂಬ ಅಂಜಿಕೆ ಅವನಿಗೆ. ಅವನು ಮೊದಲಿನಂತೆಯೇ ನಗುಮೊಗದಿಂದ ಮನೆಗೆ ಬಂದು ಹೈಮವತಿಯೊಡನೆ ಮಾತನಾಡುತ್ತಿದ್ದ. ತರಲನ ಮಗು ಬಂದು 'ಅಪ್ಪಾ ಅಪ್ಪಾ' ಎಂದು ಅವನ ತೊಡೆಗಳನ್ನು ಅವಚಿಕೊಳ್ಳುತ್ತಿತ್ತು, ಅದನ್ನವನು ನಗುನಗುತ್ತ ಕೈಮೇಲೆ ತೆಗೆದುಕೊಳ್ಳುತ್ತಿದ್ದ. ತರಲನ

ವಿಷಯವನ್ನು ಮಾತ್ರ ತೆಗೆಯುತ್ತಿರಲಿಲ್ಲ. ನಿತ್ಯವೂ ತರಲನು ಕಳ್ಳನಂತೆ ಓಡಿ ಹೋಗುತ್ತಿರುವುದು ಒಂದು ಕಡೆ, ಗೋವರ್ಧನನು ನಗುಮೊಗದಿಂದ ಅನರ್ಗಲವಾಗಿ ಮಾತನಾಡುತ್ತಿದ್ದರೂ ಅವನ ಮಾತನ್ನೆತ್ತದಿರುವುದು ಇನ್ನೊಂದು ಕಡೆ ಹೈಮವತಿಯನ್ನು ಅತ್ಯಂತ ಪೀಡಿಸುತ್ತಿದ್ದವು ತರಲನ ನಡತೆ ಹೇಯವಾದುದೆಂದು ಅವಳಿಗೆನಿಸುತ್ತಿತ್ತು. ತನ್ನ ಹಾಗೂ ತರಲನ ಅನ್ಯಾಯಕ್ಕಾಗಿ ಶಿಕ್ಷೆಯಾಗುವುದು ಉಚಿತವೆಂದು ಗೋವರ್ಧನನು ಏನನ್ನಾದರೂ ವಿಚಾರಿಸಲಿ ಎಂದು ಅವಳು ಇಷ್ಟಪಡುತ್ತಿದ್ದಳು ಅದು ಅಸಂಭವವಾಗಿ ಕಂಡು ಬರಲು ಅವಳೇ 'ಅವರು ಈವೊತ್ತು ಬಂದಿದ್ದರು' ಎಂದೆನ್ನುತ್ತಿದ್ದಳು 'ತರಲಬಾಬುವೇ? ಆಹಾ, ಅವರ ಭೆಟ್ಟಿಯಾಲಿಲ್ಲ ಆಗಲಿ ಏನವಸರ? ಆಗುತ್ತದೆ ಒಂದಿನ' ಎಂದು ಗೋವರ್ಧನನೆನ್ನುತ್ತಿದ್ದ

ಆದುದರಿಂದ ಅಂದು ತರಲನು ಬರುತ್ತಲೆ ಮುಂಚೆ ಅವನನ್ನು ಗೋವರ್ಧನನ ಕಡೆಗೆ ಕಳಿಸಿಕೊಟ್ಟಳು ಹೈಮವತಿ ಅವರಿಬ್ಬರೂ ಮುಖಾಮುಖಿ ಬೆಟ್ಟಿಯಾಗಲಿ, ಗೌಪ್ಯದ ಹಿಂದುಗಡೆಯಲ್ಲಿ ದಟ್ಟಯಿಸಿದ್ದ ಕತ್ತಲೆ ತೊಲಗಲಿ ಎಂದು ಅವಳ ವಿಚಾರ

ಬಕಾಸುರನ ಬಾಯಿಗೆ ಬಲಿಯಾಗಿ ಹೋಗುತ್ತಲಿರುವ ಪ್ರಾಣಿಯಂತೆ ಮನಸ್ಸಿಲ್ಲದೆ ಗತ್ಯಂತರವನ್ನು ಕಾಣದೆ ತರಲನು ಗೋವರ್ಧನನ ಕೋಣೆಯ ಬಾಗಿಲಿಗೆ ಹೋಗಿ, ಮೊಗದಲ್ಲಿ ನಗೆಯನ್ನೆಳೆದು ತಂದು ಮಾತನಾಡಿಸಿದ: "ಓ ಭಾಸ್ಕರ ಮಹಾಶಯ! ನೆಟ್ಟಗಿರುವಿರಾ? ನಿಮ್ಮನ್ನು ಕಾಣಬೇಕೆಂದು ಬಂದು ಹಾಗೆಯೇ ತಿರುಗಿ...."

ಗೋವರ್ಧನನು ತರಲನ ಚಿತ್ರವನ್ನು ತನ್ನ ಕೈಯಿಂದಲೇ ಬರೆದು ಹೈಮವತಿಗೆ ಉಡುಗೊರೆಯಾಗಿ ಕೊಟ್ಟಿದ್ದಾನೆ ಅವಳದನ್ನು ದಿನಾಲು ಪೂಜಿಸುತ್ತಾಳೆಂಬುದೂ ಅವನಿಗೆ ಗೊತ್ತಿದೆ ತರಲನು ನಾಮಶೇಷ ಸ್ಮೃತಿ ಮಾತ್ರ, ಬೇರೆ ಏನೂ ಅಲ್ಲ, ಎಂದೇ ಅವನಿಗದೆಲ್ಲ ಸಹ್ಯವಾಗಿದ್ದಿತು ಬಳಿಕ ತರಲನು ಬದುಕಿದ್ದಾನೆ, ದಿನದಿನವೂ ಹೈಮವತಿಯ ಕಡೆಗೆ ಬರುತ್ತಿದ್ದಾನೆ ಎಂಬುದು ತಿಳಿದಾಗ ಪ್ರತ್ಯಕ್ಷ ದರ್ಶನವಾಗಿರಲಿಲ್ಲವೆಂದೇ ಗೋವರ್ಧನನ ತಾಳ್ಮೆ ತಡೆದಿತ್ತು. ಈಗವನು ತನ್ನೆದುರಿಗೇ ಬಂದು ನಿಂತಿದ್ದಾನೆ ಗೋವರ್ಧನನ ಮನಸು ತರಲನ ಸಮಸ್ತ ಅಸ್ತಿತ್ವವನ್ನೇ ಅಲ್ಲಗಳೆದು ತಿರಸ್ಕರಿಸಿತು.

ಮನಸ್ಸಿನಲ್ಲಿಯ ಆ ತಿರಸ್ಕಾರವನ್ನು ಮುಖದ ನಗೆಯ ಮರೆಯಲ್ಲಿರಿಸಿ ಅವನೆಂದ: "ನಮಸ್ಕಾರ ತರಲಬಾಬೂ ಜೀವದಿಂದಿದ್ದರೆ ಒಂದಿಲ್ಲೊಂದು ದಿನ ಭೆಟ್ಟಿಯಾಗುವುದು! ನೀವು ಬದುಕಿರುವಿರೆಂಬುದನ್ನು ಕೇಳಿ ಸಂತೋಷವಾಗಿತ್ತು. ಇಂದು ನಿಮ್ಮನ್ನು ಕಣ್ಣಾರೆ ಕಂಡೆ. ಬರ್ರಿ, ಕೂಡಿರಿ."

ತರಲನು ಒಳಗೆ ಹೋಗಿ ಕುರ್ಚಿಯ ಮೇಲೆ ಕುಳಿತುಕೊಂಡ ಅವನ ಸ್ವಾಗತಕ್ಕಾಗಿ ಗೋವರ್ಧನನು ಚಿತ್ರದ ಕೆಲಸವನ್ನು ನಿಲ್ಲಿಸಿದ್ದ. ಸ್ವಾಗತದ ಶಾಸ್ತ್ರವನ್ನು ಮುಗಿಸಿ ಪುನಃ ಮೋರೆ ತಿರುವಿಕೊಂಡು ಕುಳಿತು ಬರೆಯತೊಡಗಿದ. ತರಲನಿಗೆ ಮಾತನಾಡಲು ಯಾವ ವಿಷಯವೂ ತೋಚಲಿಲ್ಲ; ಉತ್ಸಾಹವೂ ಇರಲಿಲ್ಲ ಅವನು ಸುಮ್ಮನೆ ಕುಳಿತು ಕುಳಿತು ಎದ್ದೋಡುವುದಕ್ಕೆ ಅವಕಾಶವನ್ನು ನಿರೀಕ್ಷಿಸುತ್ತಲಿದ್ದ. ಕೆಲಹೊತ್ತಿನ ಮೇಲೆ "ನಾನು ಬರುತ್ತೇನೆ ಹಾಗಾದರೆ" ಎಂದ.

ಗೋವರ್ಧನನು ಮುಖವನ್ನು ಈಕಡೆ ತಿರುಗಿಸಿ ಪ್ರಸನ್ನಹಾಸ್ಯದೊಡನೆ ನುಡಿದ: "ಒಳ್ಳೇದು, ನಮಸ್ಕಾರ. ನಾಳೆ ಮತ್ತೆ ಭೆಟ್ಟಿಯಾಗುವುದು, ಆದಿತ್ಯವಾರವಿದೆ. ಹೇಮುಳ ಭೆಟ್ಟಿ ಆಗಿದೆಯಷ್ಟೆ?...."

ತರಲನು ಹೋಗುಹೋಗುತ್ತ ಲಜ್ಜೆಯಿಂದ ಸಂಕುಚಿತನಾಗಿ ಗೋಣು ಹಾಕಿ ಉತ್ತರವಿತ್ತ: "ಹಾಂ."

"ಅವಳಿಗೆ ಹೇಳಿ ಹೋಗಿರಿ."

ಗೋವರ್ಧನನ ಸಹಜ ಶಿಷ್ಟಾಚಾರವನ್ನು ಕಂಡು ತರಲನ ಮನಸಿನ ಸಂಕೋಚವು ದೂರವಾಯಿತು. ತಾನು ಹೈಮವತಿಯ ಹತ್ತಿರ ಬಂದು ಹೋಗಿ ಮಾಡಿದರೆ ಗೋವರ್ಧನನ ಅಡ್ಡಿಯೇನೂ ಇರಲಾರದೆಂದು ಅವನು ಅರ್ಥ ಮಾಡಿಕೊಂಡ.

ಅವರಿಬ್ಬರಲ್ಲಿ ಏನೇನು ಮಾತುಕತೆ ನಡೆಯುವುವೆಂಬುದನ್ನು ಹೈಮವತಿ ಹೊರಮಗ್ಗಲು ನಿಂತು ಕಿವಿಗೊಟ್ಟು ಕೇಳುತ್ತಿದ್ದಳು. ತರಲನು ಗೋವರ್ಧನನಿಗೆ ಶಿಷ್ಟಾಚಾರದಂತೆ ನಮಸ್ಕಾರ ಮಾಡಲಿಲ್ಲ. ತದ್ವಿರುದ್ಧವಾಗಿ ಗೋವರ್ಧನನು ಯಾವ ವಿಚಾರವನ್ನೂ ಮನಸಿನಲ್ಲಿ ತಂದುಕೊಳ್ಳದೆ ಅವನಿಗೆ ವಂದನೆ ಸಲ್ಲಿಸಿದ. ತರಲ-ಹೈಮವತಿಯರಲ್ಲಿ ಪ್ರೇಮಸಂಬಂಧವಿದ್ದುದು ಗೊತ್ತಿದ್ದರೂ

ತರಲನು ತಮ್ಮ ಮನೆಗೆ ಬರುವುದನ್ನು ಅವನು ನಿಷೇಧಿಸಲಿಲ್ಲ, ಇಷ್ಟೇ ಅಲ್ಲ, ಅವರಿಬ್ಬರ ಭೆಟ್ಟಿಯ ಬಗ್ಗೆ ಆಸಕ್ತಿಯನ್ನೇ ತೋರಿಸಿದ. ಅವರಿಬ್ಬರ ಮೇಲೆ ಗೋವರ್ಧನನಿಗೆ ಎಷ್ಟು ವಿಶ್ವಾಸ! ಇವನ್ನೆಲ್ಲ ಕೇಳಿ ಹೈಮವತಿಯ ಚಿತ್ತದಲ್ಲಿ ಅವನ ಬಗ್ಗೆ ಸನ್ಮಾನಶ್ರದ್ಧೆಗಳು ಹೆಚ್ಚಿದವು. ಅವಳ ಮುಖದಲ್ಲಿ ಪ್ರಸನ್ನ ಪ್ರಫುಲ್ಲತೆ ಉದಯಿಸಿತು.

ತರಲನು ಹೊರಗೆ ಬಂದಾಗ ಹೈಮವತಿಯ ಮುಖಮಂಡಲವು ನಗೆಯಿಂದ ತೊಳಗುತ್ತಿತ್ತು. ಅವಳು ನಗೆಯಿಂದ 'ನೋಡಿದೆಯಾ, ಎಂತಹ ದೊಡ್ಡ ಮನುಷ್ಯ!' ಎಂದು ಅವನಿಗೆ ಸೂಚಿಸಲಾಸಿಸಿದ್ದಳು. ಆ ನಗೆಯ ಅರ್ಥ ತರಲನಿಗೆ ತಿಳಿಯಲಿಲ್ಲ. ಅವನು ಅವಜ್ಞಾಭಾವದಿಂದ ನಕ್ಕುಬಿಟ್ಟ. 'ಬಿಡು, ಪೀಡೆ ತಪ್ಪಿದಂತಾಯಿತು; ಗೋವರ್ಧನನು ನಮ್ಮ ಸಂಬಂಧದ ವಿಷಯದಲ್ಲಿ ವಿಶೇಷವೇನೂ ಗಲಭೆ ಮಾಡುವ ಸಾಹಸಕ್ಕೆ ಹೋಗುವುದಿಲ್ಲ' ಎಂಬುದು ಆ ನಗೆಯ ಭಾವ!

ಅವನು ಹೋಗುತ್ತಲೇ ಗೋವರ್ಧನನ ಮೋರೆ ಕಠೋರವಾಗಿ ಕಪ್ಪಿಟ್ಟಿತು. ಮುಗಿಯುತ್ತ ಬಂದಿದ್ದ ಚಿತ್ರದ ಮೇಲೆ ಕುಂಚವನ್ನೆಳೆದೆಳೆದು ಕೆಡಿಸಲು ತೊಡಗಿದ. ಆ ಹೊತ್ತಿನಲ್ಲಿ ಮಗು ಒಳಗೆ ಹೋಗಿ, ಅವನ ತೊಡೆಯ ಮೇಲೆ ಬಾಗಿ ಅಚ್ಚೆಯಿಂದ 'ಅಪ್ಪಾ' ಎಂದಿತು. ಗೋವರ್ಧನನು ಚಿತ್ರವನ್ನು ಬಿಟ್ಟು, ಮಗುವಿನ ಗದ್ದವನ್ನು ಹಿಡಿದೆತ್ತಿ ಅದರ ಮುಖಕ್ಕೇ ಬಣ್ಣ ಬಳಿದ.

ಮಗು ಆನಂದದಿಂದ "ಅವ್ವನಿಗೆ ತೋರಿಸುತ್ತೇನೆ ಹೋಗಿ, ನಾನು ಚಿತ್ರ ಆಗಿದ್ದೇನೆ," ಎಂದೆನ್ನುತ್ತ ಓಡಿತು.

ಗೋವರ್ಧನನು ಚಿತ್ರವನ್ನು ಚೂರುಚೂರಾಗಿ ಹರಿದು ಕೋಣೆಯ ತುಂಬ ಸೂರೆಮಾಡಿದ.

## ೨೭

ತರಲ-ಗೋವರ್ಧನರ ಭೆಟ್ಟಿಯಾಗಿ ಯಾವುದೂ ಮುಚ್ಚುಮರೆಯಾಗಿ ಉಳಿಯಲಿಲ್ಲವೆಂದು, ಗೋವರ್ಧನನ ಸಹಜವಾದ ಮಾತುಗಳನ್ನು ಕೇಳಿ ಹೈಮವತಿಗೆ ಆಶ್ವಾಸನೆ ದೊರೆತಂತೆನಿಸಿತು; ಅವಳು ನಿಶ್ಚಿಂತಳಾದಳು.

ತಾರಾಪುರದಲ್ಲಿ ತವರುಮನೆಯೊಳಗಿದ್ದಾಗ ತನ್ನ ಮತ್ತು ತರಲನ ಸಂಬಂಧ ದಲ್ಲಿ ಗೋವರ್ಧನನು ಗೆಳೆತನದ ಮಧುರಸ್ಥಾನದಲ್ಲಿದ್ದ ಹಾಗೆ, ಈಗ ತನ್ನ ಮತ್ತು ಗೋವರ್ಧನನ ಸಂಬಂಧದಲ್ಲಿ ತರಲನೂ ಆತ್ಮೀಯ ಮಿತ್ರನಾಗಿ ಇರ ಬಲ್ಲನೆಂದು ಅವಳಿಗೆನಿಸಿತು ತರಲನನ್ನು ಸಂಪೂರ್ಣವಾಗಿ ಸಂಪಾದಿಸಲಿಲ್ಲ ವೆಂಬ ದುಃಖದಲ್ಲಿಯೂ ಇಷ್ಟು ಪಡೆದುದೇ ಮಹಾಪುಣ್ಯವೆಂದು ಅವಳ ಭಾವನೆ ಯಾಯಿತು. ಅವಳ ಮುಖವು ಆನಂದದಿಂದ ಕಳೆಗೊಂಡಿತು

ಹೈಮವತಿಯ ಈ ತೆರದ ಆನಂದಮೂರ್ತಿಯನ್ನು ಗೋವರ್ಧನನು ಎಂದೂ ಕಂಡಿರಲಿಲ್ಲ. ಅವಳ ಪ್ರತ್ಯಂಗವೂ ಆನಂದಪೂರ್ಣವಾಗಿರುವಂತೆ, ಅವಳ ಪ್ರತಿ ಚಲನವಲನವೂ ಆನಂದದಿಂದ ಅಧೀರವಾಗಿರುವಂತೆ ಅವನಿಗೆ ತೋರಿತು. ಅದರ ದರ್ಶನದಿಂದ ಅವನಿಗೆ ಹಿಂಸೆಗಿಂತ ಮಿಗಿಲಾಗಿ ಆಹ್ಲಾ-ದವೇ ಆಯಿತು. ತನ್ನ ಪ್ರೀತಿಪಾತ್ರಳು—ಕಾರಣವೇನೇ ಇರಲಿ—ಆನಂದ ಭರಿತಳಾಗಿದ್ದರೆ ಸಾಕು! ಈ ಆನಂದಮೂರ್ತಿಯ ದರ್ಶನವು ಲಭಿಸಿದರೆ ತರಲ ನನ್ನೂ ಸಹಿಸಿಕೊಳ್ಳಬಹುದು ಎಂದು ಅವನೆಂದುಕೊಂಡ. ನಗುನಗುತ್ತ ಅವನು ಹೈಮವತಿಗೆಂದ: "ಓ ಆನಂದಮೂರ್ತಿ! ನಿನ್ನ ಕನ್ನಡಿಯಂತಹ ಆನಂದಿತ ಮೂರ್ತಿಯನ್ನು ನೋಡಿ ನಾನು ಸಹಿಸಲಾರೆ—ಜಗತ್ತಿನಲ್ಲಿ ಇಂತಹ ದುಃಖ ಮತ್ತೊಂದಿಲ್ಲ!"

ಹೈಮವತಿಯ ಮಿಲನದ ಆಶೆಯ ಚಿತೆಯ ಮೇಲೆ ನಿಂತುಕೊಂಡು ಗೋವರ್ಧನನು ತನ್ನ ಅವ್ಯಕ್ತ ಪ್ರಣಯವನ್ನು ಇಂದೇ ಮೊದಲ ಬಾರಿ ಅವ ಳಿಗೆ ಸೂಚ್ಯವಾಗಿ ಅರುಹಿದ ಅವಳು ನಾಚಿಕೆಯಿಂದ ನಗೆಮೊಗವನ್ನು ತಗ್ಗಿಸಿ ದಳು. ಆ ನಗೆಯೊಳಗೆ ಅವಳು ಗೋವರ್ಧನನ ವಿಷಯದಲ್ಲಿ ಶ್ರದ್ಧೆಯನ್ನು ಗೌರವವನ್ನು, ಹೆಚ್ಚಾಗಿ ಅನುರಾಗರಂಜಿತವಾದ ಪ್ರೇಮವನ್ನೂ ಪ್ರಕಟಗೊಳಿ ಸಿದಳು. ಅವನು ಮತ್ತಷ್ಟು ಪುಲಕಿತನಾದ.

ಆದರೆ ಹೈಮವತಿಯ ಆನಂದವು ಸ್ಥಿರವಾಗಿ ಉಳಿಯಲಿಲ್ಲ. ಮರುದಿನ ಆದಿತ್ಯವಾರ ತರಲನು ಬರಲಿಲ್ಲ ಅವಳಿಗೆ ದುಃಖವಾಯಿತು, ಚಿಂತೆ-ಯಾಯಿತು. ಕೆಲಮಟ್ಟಿಗೆ ಬಯಸಿದ ಪ್ರಿಯನ ದರ್ಶನವು ಲಭಿಸದಿದ್ದುದೊಂದು ಕಾರಣ, ಬಹುಮಟ್ಟಿಗೆ ತರಲನು ಏಕೆ ಬರಲಿಲ್ಲವೋ ಎಂಬ ಸಂದೇಹ

ವಿನ್ನೊಂದು ಕಾರಣ. ಗೋವರ್ಧನನನ್ನು ತಪ್ಪಿಸಿ ತನ್ನನ್ನು ಕಾಣಬೇಕೆಂಬುದು ತರಲನ ಇಚ್ಛೆಯೆ? ಎಂತಹ ಕುವಿಚಾರ! ಎಷ್ಟು ಭಯಂಕರ!

ಹೈಮವತಿಯ ಚಿಂತಾಕುಲವಾದ ಬಾಡಿದ ಮೊಗವನ್ನು ನೋಡಿ ಗೋವರ್ಧನನ ಮನಸೂ ಖಿನ್ನವಾಯಿತು. 'ತರಲನು ಏಕೆ ಬರಲಿಲ್ಲವೊ? ಮೈಯೊಳಗೆ ನೆಟ್ಟಗಿರಲಿಕ್ಕಿಲ್ಲವೆ?'

ಸೋಮವಾರ ದಿವಸ ತರಲನು ಬಂದೇ ಬಂದ. ಅಂದು ಹೈಮವತಿ ಅವನನ್ನು ನಗುಮೊಗದಿಂದ ಬರಮಾಡಿಕೊಳ್ಳಲಿಲ್ಲ. "ನಿನ್ನೆ ಏಕೋ ಬರಲಿಲ್ಲ?" ಎಂದು ಪ್ರಶ್ನಿಸಿದಳು

ತರಲನು ನಕ್ಕು ಉತ್ತರವಿತ್ತ: "ಆ ಕಾಡು ಕ್ಷುದ್ರ ಮನುಷ್ಯ ಯಾವಾಗಲೂ ಮನೆಯಲ್ಲಿಯೇ ಸೇರಿಕೊಂಡಿರುತ್ತಾನೆ; ಬರುವುದರಲ್ಲಿ ಏನರ್ಥವಿದೆ? ಮನಸು ಬಿಚ್ಚಿ ಮಾತನಾಡಲಿಕ್ಕೂ ಆಗುವುದಿಲ್ಲ. ಅವನೊಂದು ಉತ್ಪಾತವಾಗಿದ್ದಾನೆ ನಮ್ಮ ಪಾಲಿಗೆ!—ಕಥಾಮಾಲೆಯ ಕಥೆಯೊಳಗಿನ ಕುದುರೆಯ ಕಡಲೆಯ ಪೆಟ್ಟಿಗೆಯಲ್ಲಿಯ ನಾಯಿಯಂತೆ—ತಾನೂ ತಿನ್ನುವಂತಿಲ್ಲ, ಇನ್ನೊಬ್ಬರಿಗೂ ತಿನ್ನಗೊಡುವುದಿಲ್ಲ ಕಳ್ಳನ ಮುಂದೆ ದರೋಡೆಗಾರನಾದ ಹೊರತು ಬೇರೆ ಉಪಾಯವೇನು?"

ತನ್ನ ವಿಷಯದಲ್ಲಿ ಹೈಮವತಿ ತೋರುತ್ತಿದ್ದ ಆನಂದಾತುರಗಳನ್ನು ಮಾತ್ರವೇ ನೆನೆದು, ಗೋವರ್ಧನನೊಡನೆ ಅವಳ ಸಂಬಂಧ—ಅದು ಯಾವ ಬಗೆಯದೇ ಇರಲೊಲ್ಲದೇಕೆ—ಘನಿಷ್ಠವಾಗಿರುವುದನ್ನು ಪೂರಾ ಮರೆತು ಬಿಟ್ಟು, ತರಲನು ಬಾಯಿಗೆ ಬಂದುದನ್ನು ಬಡಬಡಿಸಿ ನಗಲಾರಂಭಿಸಿದ. ಅವನ ಈ ನಡತೆ, ಈ ಉದ್ದೇಶ ಹೈಮವತಿಗೆ ಸೇರಲಿಲ್ಲ ತಾನು ಪರಸ್ತ್ರೀಯೆಂದು, ತನ್ನ ಮೇಲೆ ಗೋವರ್ಧನನ ಉಪಕಾರ ಅನಂತವಾಗಿದೆಯೆಂದು ತರಲನಿಗೆ ಗೊತ್ತಿದೆ. 'ಸುಸಂಸ್ಕೃತ ಮನುಷ್ಯ'ರ ಕಲಂಕವನ್ನು ತೊಡೆದು ಹಾಕಲು ಮಹತ್ತತೆಯನ್ನೂ ಔದಾರ್ಯವನ್ನೂ ತೋರಿದವನು ಈ 'ಕಾಡು ಕ್ಷುದ್ರ ಮನುಷ್ಯ'ನೇ ಅಲ್ಲವೆ? ಅವನ ಹೆಂಡತಿಯನ್ನು ಕಲಂಕಿತಳನ್ನಾಗಿ ಮಾಡುವುದೇ ಸುಸಂಸ್ಕೃತ ಮನುಷ್ಯನಾದ ತರಲನು ಅವನಿಗೆ ಕೊಡುವ ಪುರಸ್ಕಾರವೆ? ತಾನು ನಿನ್ನೆ ಬರದಿದ್ದುದಕ್ಕೆ ತರಲನು ಏನಾದರೊಂದು ಕಾರಣ

ವನ್ನು ಹುಟ್ಟಿಸಿ ಹೇಳಿದ್ದರೂ ಹೈಮವತಿಗೆ ಸಂತೋಷವಾಗುತ್ತಿತ್ತು ಈ ಸತ್ಯ ಎಂತಹ ಭಯಂಕರ! ಗೋವರ್ಧನನು ಶಪಥದ ಬಲೆಯಲ್ಲಿ ಸಿಕ್ಕಿಬಿದ್ದುದನ್ನು ಕಂಡು, ಅವನ ದೊಡ್ಡತನ-ಸಜ್ಜನಿಕೆಗಳ ಸುಯೋಗವನ್ನು ಪಡೆದು, ಅವನ ಮನೆಯಲ್ಲಿ ನಿಂತುಕೊಂಡು ಅವನ ಹೆಂಡತಿಯ ಎದುರಿನಲ್ಲಿಯೇ ಇಂತಹ ಹೇಸಿ ಮಾತನಾಡುವುದೆಂದರೆ! ಹೈಮವತಿಯು ಮೈನೆತ್ತರೆಲ್ಲ ಕುದಿಯಿತು ಹಿಂದೊಮ್ಮೆ ಅವಳು ಅವನಿಗೆ ತನ್ನ ಸರ್ವಸ್ವವನ್ನು ನೀಡಿದ್ದಳು, ಅವನಿಗೆ ಸರ್ವಸ್ವವನ್ನು ನೀಡಲು ಅವಳ ಮನಸು ಯಾವಾಗಲೂ ಉನ್ಮುಖವಾಗಿರುವುದು; ಅವನೀಗ ಕಳ್ಳನ ವೇಷದಿಂದ ಬಂದು ಆಸೆಬುರುಕನಂತೆ ಕೈಯೊಡ್ಡುತ್ತಿದ್ದಾನೆ ಈ ದೃಶ್ಯ ಹೈಮವತಿಗೆ ಕುತ್ಸಿತವಾಗಿ ಕಂಡಿತು ಗೋವರ್ಧನನ ಪಕ್ಕದಲ್ಲಿ ತರಲನು ಅತ್ಯಂತ ಹೊಲಸಾಗಿ, ಹೀನನಾಗಿ ಕಂಡ. ಹೈಮವತಿಯ ಮೇಲೆ ತನ್ನ ನಿಜವಾದ ಅಧಿಕಾರವೇನೂ ಇಲ್ಲವೆಂದು ತಿಳಿದಾಗಲಿ, ತನ್ನ ಪ್ರೀತಿಪಾತ್ರಳು ಆನಂದದಿಂದಿದ್ದರೆ ಸಾಕೆಂದಾಗಲಿ, ಅವಳಲ್ಲಿ ತನಗೆ ನಂಬುಗೆಯಿರುವುದ-ರಿಂದಾಗಲಿ ಗೋವರ್ಧನನು ತರಲ-ಹೈಮವತಿಯರ ಪ್ರತಿದಿನದ ಮಿಲನದ ಬಗ್ಗೆ ಒಂದಿಷ್ಟೂ ಅಪ್ರಸನ್ನತೆಯನ್ನು ತೋರಲಿಲ್ಲ. ಅವನ ಕಡೆಯಿಂದ ಯಾವ ವಿರೋಧವೂ ಇಲ್ಲದಿರುವಾಗ, ಅವಳ ಅನುರಾಗವ್ಯಗ್ರವಾದ ಮನಸಿನ ಪೊಳ್ಳು ವಿರೋಧವು ತರಲನ ಲೋಲುಪ ಆಕರ್ಷಣೆಗೆ ಬಹಳ ಹೊತ್ತು ತಾಳಿ ನಿಲ್ಲ-ಲಿಕ್ಕೂ ಇಲ್ಲ!—ಇದನ್ನು ನೆನೆದು ಹೈಮವತಿಯ ಮೈಮನಗಳಿಗೆ ಭಯದಿಂದ ಮುಳ್ಳು ಬಂದವು. ಅವಳ ಮೋರೆಯೊಣಗಿ ದೃಷ್ಟಿ ವ್ಯಾಕುಲತೆಯಿಂದ ಚಂಚಲವಾಯಿತು.

"ನೀನು ಹೀಗೇಕೆ ಮಾಡುತ್ತಿದ್ದೀ?" ತರಲನು ಸಂದೇಹಗೊಂಡು ಕೇಳಿದ.

ಹೈಮವತಿ ಯಂತ್ರದ ಗೊಂಬೆಯಂತೆ ಭಾವಹೀನವಾದ ವಾಕ್ಯಗಳನ್ನು ಉಚ್ಚರಿಸಿದಳು: "ಹೋಗು, ನೀನು ಹೊರಟುಹೋಗು; ಇನ್ನೆಂದೆಂದೂ ನನ್ನ ಹತ್ತಿರ ಬರಬೇಡ!"

ಆಡಿದ ಮೇಲೆ ಅವಳಿಗೆನಿಸಿತು—ಮಾತು ಬಹಳ ಕಟುಕಠೋರವಾಯಿತೆಂದು, ತನ್ನ ಕೈಯಿಂದಲೇ ತನ್ನ ಹೃದಯವನ್ನು ಉತ್ಪಾಟನ ಮಾಡಿ ಒಗೆದೆನೆಂದು. ತನಗೆ ತಾನೇ ತಂದುಕೊಂಡ ದುರ್ದಶೆಯ ಕರುಣದೃಶ್ಯವನ್ನು

ಕಂಡು ಅವಳಿಗೆ ದುಃಖವು ಉಕ್ಕಿ ಬಂದಿತು. ತನ್ನ ಆ ದೌರ್ಬಲ್ಯವನ್ನು ಮುಚ್ಚಿಕೊಳ್ಳಲೆಂದು ತರಲನ ಕಡೆ ಬೆನ್ನು ತಿರುವಿ ಕೋಣೆಯಿಂದ ಹೊರ-ಬಿದ್ದಳು. ಆಗ ಹೊರಗೆ ಮಹಾಮಳೆ ಸುರಿಯುತ್ತಿತ್ತು—ಝುವ್ ಝುವ್ ಝುವ್!

ತರಲನು ವಜ್ರಾಹತನಂತೆ ಅವಾಕ್ಕಾಗಿ ಆಶ್ಚರ್ಯದಿಂದ ಕಣ್ಣುಬಿಟ್ಟು ಕೊಂಡು ಅವಳ ಕಡೆಗೇ ನೋಡುತ್ತಲಿದ್ದ. ಅವಳ ಮಾತಿನ ಅರ್ಥವಾಗಲಿ ಉದ್ದೇಶವಾಗಲಿ ಅವನಿಗೆ ತಿಳಿಯಲಿಲ್ಲವೇನೋ. ಆದರೆ ಮರುಕ್ಷಣದಲ್ಲಿಯೇ ಹೈಮವತಿಯ ಕಂಬನಿಗಳು ಅವನ ಮೃತಪ್ರಾಯ ಆಸೆ-ಸಾಹಸಗಳಿಗೆ ಜೀವ ದಾನ ಮಾಡಿದವು. ತತ್‌ಕ್ಷಣ ಅವನು ಹಿಂದಿನಿಂದ ಹೋಗಿ ಅವಳ ಹೆಗಲ-ಮೇಲೆ ಕೈಯಿಟ್ಟು ಕೋಮಲಸ್ವರದಿಂದ ನುಡಿದ: "ಹೇಮ, ಹೋಗಬೇಡ, ಇಲ್ಲಿ ಕೇಳು...."

ಒಂದು ಕಾಲದಲ್ಲಿ ತರಲನ ಬಾಹುಬಂಧವು ಹೈಮವತಿಯ ಹೃದಯ ದಲ್ಲಿ ಸ್ವರ್ಗಲೋಕವನ್ನೇ ಸೃಜಿಸುತ್ತಿತ್ತು. ಈಗ ಆ ಕೈಯೇ ಹಾವಿನ ಹೆಡೆ ಯಂತೆ ಹೆಗಲ ಮೇಲೆ ಬಿದ್ದೊಡನೆ ಅವಳು ಬೆಚ್ಚಿಬಿದ್ದಳು. ತಟ್ಟನೆ ಅವನ ಸ್ಪರ್ಶದಿಂದ ಬಿಡುಗಡೆ ಹೊಂದಿ ಓಡಿದಳು. ಅವಸರದಲ್ಲಿ ಸೀರೆ ಕಾಲಿಗೆ ತೊಡಕಿ ಮುಗ್ಗರಿಸಿ ಬಿದ್ದಳು. ನೆಲಕ್ಕೆ ಬೀಳುವುದರೊಳಗೇ ತರಲನು ಅವ ಳನ್ನು ಹಿಡಿದುಕೊಂಡ.

ಅದೇ ಸಮಯದಲ್ಲಿ ಗೋವರ್ಧನನು ಹೊರಗಿನಿಂದ ತಿರುಗಿ ಬಂದ. ಅಟ್ಟದ ಮೆಟ್ಟಲೇರಿದೊಡನೆ ಅವನ ಕಣ್ಣಿಗೆ ಬಿದ್ದಿತು—ಹೈಮವತಿ ತರಲನ ತಕ್ಕೆಯಲ್ಲಿ! ಅವಳ ವಸ್ತ್ರಭೂಷಣಗಳು ಅಸ್ತವ್ಯಸ್ತ! ಗೋವರ್ಧನನು ನಿಃಶಬ್ದ ವಾಗಿ ಕೆಳಗಿಳಿದು ಬಂದುಬಿಟ್ಟ. ಆಗ ಕಡ್‌ಕಡ್‌ಕಡ್‌ಕಡಾತ್ ಎಂದು ಮುಗಿಲಿನ ಎದೆಯನ್ನು ಸೀಳಿ, ಭೂಮಿಯ ಒಡಲನ್ನು ಒಡೆದು, ಹತ್ತುದಿಕ್ಕು ಗಳನ್ನೂ ವಿದ್ಯುತ್ತಿನಿಂದ ಬೆಳಗಿ ಪ್ರಚಂಡವಾದ ವಜ್ರಾಘಾತವಾಯಿತು. ಮಳೆ ಬೀಳುತ್ತಲೇ ಇತ್ತು ಝುವ್ ಝುವ್ ಝುವ್!

"ಹೋಗು, ಇನ್ನೆಂದೆಂದೂ ಇಲ್ಲಿಗೆ ಬರಬೇಡ!" ತರಲನ ಅಪ್ಪುಗೆ-ಯನ್ನು ಬಿಡಿಸಿಕೊಂಡು ದೃಢಸ್ವರದಿಂದ ಹೈಮವತಿ ನುಡಿದಳು.

ಅವಳ ಈ ವಿರಾಗದ ಕಾರಣವು ತರಲನಿಗೆ ಗೊತ್ತಾಗದಿದ್ದರೂ ಮೇಲಧಿಕಾರಿಯ ಅಪ್ಪಣೆಯನ್ನು ಪಾಲಿಸುವಂತೆ ಎದುರಾಡದೆ ಅವನು ಮೆಲ್ಲಮೆಲ್ಲನೆ ಹೊರಟುಹೋದ.

## ೨೯

ಸೋಪಾನಶ್ರೇಣಿಯ ಪಕ್ಕದಲ್ಲಿ ಗೋವರ್ಧನನು ಸ್ತಬ್ಧವಾಗಿ ನಿಂತಿದ್ದ. ಹೈಮವತಿಯಿಂದ ಮಾತಿನ ಹೊಡೆತವನ್ನು ತಿಂದು ತರಲನ ಮೋರೆ ಮೊದಲೇ ಬಾಡಿತ್ತು; ಗೋವರ್ಧನನ ದರ್ಶನದಿಂದ ಅದು ಮತ್ತಷ್ಟು ಬತ್ತಿತು. ಆದರೂ ಒತ್ತಾಯದಿಂದ ಮುಖದಲ್ಲಿ ನಗೆಯನ್ನು ತಂದುಕೊಂಡು, 'ಓ ಭಾಸ್ಕರಮಹಾಶಯ' ಎಂದು ಮಾತನಾಡಿಸಲು ಅವನು ಹವಣಿಸಿದ. ಆದರೆ ಅವನ ಬಾಯಿಂದ ಪೆಂಪೆಂ ಎಂಬ ಸದ್ದು ಮಾತ್ರ ಹೊರಟಿತು. ತರಲನಿಗೆ ತನ್ನ ಅವಸ್ಥೆಗಾಗಿ ತನಗೇ ನಾಚಿಕೆಯುಂಟಾಯಿತು, ಭಯವುಂಟಾಯಿತು. ಅವನು ಹೋಳಾಗಿ ಜಾರಿಕೊಂಡು ಓಡಬೇಕೆಂದು ಉಜ್ಜುಗಿಸಿದ. ಅದನ್ನು ಕಂಡು ಗೋವರ್ಧನನು ಏನೋ ಒಂದು ತೆರನಾದ ನಗುಮೊಗದಿಂದ ನುಡಿದ: "ಇಂಥ ಮಳೆಯೊಳಗೆ ಹೇಗೆ ಹೋಗುತ್ತೀರಿ ತರಲಬಾಬೂ? ಬರ್ರಿ, ಇಲ್ಲಿಯೇ ಕೋಣೆಯಲ್ಲಿ ಒಂದಿಷ್ಟು ಕುಳಿತುಕೊಳ್ಳುವ."

ಕೋಲುಮಿಂಚಿನ ಸೆಳಕಿನಂತಹ ಆ ನಗೆಗೆ ತರಲನು ಭೀತಿಗೊಂಡು "ನನಗೆ ಕೆಲಸವಿದೆ, ಹೋಗಬೇಕು," ಎಂದ.

ಅವನ ಭಯಾಕುಲವಾದ ತ್ವರೆಯನ್ನು ಕಂಡು ಗೋವರ್ಧನನು ಅವಹೇಲನೆಯ ನಗೆಯಿಂದ ಇನ್ನಷ್ಟು ತುಚ್ಛೀಕರಿಸಿ ಮಾತನಾಡಿದ: "ನಿಮ್ಮ ಹತ್ತಿರ ಸಣ್ಣದೊಂದು ಕೆಲಸವಿದೆ. ಒಂದು ಗಳಿಗೆ ನಿಂತು ಹೋಗಿರಿ. ಹೆಚ್ಚು ತಡವೇನಾಗುವುದಿಲ್ಲ; ಬರ್ರಿ."

ತರಲನಿಂದ ಓಡಿಹೋಗಲಾಗಲಿಲ್ಲ. ಅಜಗರದ ದೃಷ್ಟಿಗೆ ಮೋಹಗೊಂಡ ಮೊಲವು ಪಲಾಯನಕ್ಷಮತೆಯನ್ನು ಕಳೆದುಕೊಂಡು ತಾನಾಗಿ ಹೋಗಿ ಅದರ ಬಾಯಿಯೊಳಗೆ ಬೀಳುವಂತೆ, ಅವನು ಮೆಲ್ಲಮೆಲ್ಲನೆ ಗೋವರ್ಧನನ ಹಿಂದೆ ಹಿಂದೆ ಹೋಗಿ ಪಕ್ಕದ ಕೋಣೆಯನ್ನು ಪ್ರವೇಶಿಸಿದ.

ಒಳಗೆ ಹೋದ ಬಳಿಕ ಗೋವರ್ಧನನು ಬಾಗಿಲನ್ನಿಕ್ಕಿದ. ತರಲನ ಮೋರೆ ಒಣಗಿಹೋಯಿತು. ಅವನಿಗೆದುರಾಗಿ ನಿಂತು ಗೋವರ್ಧನನೆಂದ: "ಇಲ್ಲಿ ನೋಡಿರಿ ತರಲಬಾಬು, ನೀವು ಹೈಮವತಿಯನ್ನು ಪ್ರೀತಿಸುವಿರಿ, ನಾನೂ ಪ್ರೀತಿಸುತ್ತೇನೆ. ನಾವಿಬ್ಬರೂ ಒಬ್ಬರಿಗೊಬ್ಬರು ಕಂಟಕ. ವಾಸ್ತವವಾಗಿ ನಿಮ್ಮ ಹೆಂಡತಿಯಾಗಬೇಕಾಗಿದ್ದವಳನ್ನು ನಾನು ಲಗ್ನವಾಗಿದ್ದೇನೆ. ನಮ್ಮ ಮನೆಯೊಳಗೆ ನನ್ನನ್ನು ಬದಿಗಿರಿಸಿ ನನ್ನ ಹೆಂಡತಿಯನ್ನು ನೀವು ಸಂದರ್ಶಿಸುವುದೂ ಉಚಿತವಲ್ಲ; ನನಗೂ ಬದುಕಿದ್ದು ಕಳೆದುಕೊಳ್ಳುವುದಕ್ಕಿಂತ ಸತ್ತು ಕಳೆದುಕೊಳ್ಳುವುದು ಎಷ್ಟೋ ಸಹಜ. ಈಗ ನಮ್ಮಿಬ್ಬರಲ್ಲಿ ಒಬ್ಬರು ಸಾಯಲೇಬೇಕಾಗುವುದು."

ಸಾಯುವ ಕೆಲಸ ಅತ್ಯಂತ ಸಹಜವಾದುದೆಂಬಷ್ಟು ಸ್ವಾಭಾವಿಕವಾಗಿ ಗೋವರ್ಧನನು ಮಾತನಾಡಿದ. ಅವನ ಭಾವಭಂಗಿಯಿಂದ ದೃಢಸ್ವರದಿಂದ ತರಲನ ಎದೆಯೊಳಗೆ ಧಕ್‌ಧಕ್ಕೆನ್ನಲಾರಂಭಿಸಿತು. ಗೋವರ್ಧನನು ಈಗಲೇ ತನ್ನನ್ನು ಕೊಂದುಹಾಕುವನೋ ಎಂದು ಅವನಿಗೆ ಭಯವಾಯಿತು. ಏನೋ ಒಂದು ತೆರದ ಶಬ್ದಮಾಡಿ ಹೇಗೋ ಮಾತನಾಡಿದ: "ನಾನಂತೂ ಏನೂ...."

ಗೋವರ್ಧನನು ಅವಿಚಲ ಸ್ವರದಿಂದ ನಡುವೆಯೇ ನುಡಿದ: "ಇರಲಿ, ಸುಳ್ಳಾಡುವ ಅಗತ್ಯವೇನೂ ಇಲ್ಲ. ಅಂಜುಬುರುಕ ನೀಚನನ್ನು ತಂದು! ಕ್ಷುದ್ರ ಪ್ರಾಣಿ ಪ್ರೀತಿಸಲು ಬಂದಿದ್ದಾನೆ! ಯಾರನ್ನು ಪ್ರೀತಿಸುವೆಯೋ ಅವರಿಗಾಗಿ ಸಾಯಲು ಅಂಜಿದರೆ ಅದೆಂತಹ ಪ್ರೀತಿ? "

ತರಲನು ಕಾತರನಾಗಿ ಬಿಡುಗಡೆ ಹೊಂದುವುದಕ್ಕಾಗಿ ನುಡಿದ: "ನಾನು ಇನ್ನು ಬರುವುದಿಲ್ಲ...."

ಗೋವರ್ಧನನು ತಿರಸ್ಕಾರದಿಂದ, ಕನಿಕರದಿಂದ ನಕ್ಕು ಮತ್ತೆ ದೃಢ ಸ್ವರದಿಂದ ಹೇಳಿದ: "ಇನ್ನು ಓಡಿಹೋಗುವುದರಿಂದ ಪ್ರಯೋಜನವಿಲ್ಲ. ಒಬ್ಬರು ಸಾಯಲೇಬೇಕು. ಇಕಾ, ಬೆರಳು ಹಿಡಿಯಿರಿ; ಯಾರು ಸಾಯಬೇಕೆಂಬುದು ಇತ್ಯರ್ಥವಾಗಿಹೋಗಲಿ."

ತನ್ನನ್ನು ಗೋವರ್ಧನನು ಕತ್ತು ಹಿಸುಕಿಯೋ ಚೂರಿಯಿಂದಿರಿದೋ ಕೊಲೆಮಾಡುವನೆಂದು ತರಲನು ಅಂಜಿದ್ದ. ಈ ದೈವಪರೀಕ್ಷೆಯ ಆಟವನ್ನು

ಹೊಡಿದುದರಿಂದ ಅವನಿಗೆ ಕೊಂಚ ಧೈರ್ಯಬಂದಂತಾಯಿತು. ಮರುಕ್ಷಣವೇ—ಗೋವರ್ಧನನು ಎರಡು ಬೆರಳುಗಳನ್ನು ಬಿಡಿಸಿ ಇದಿರಿಗೆ ಹಿಡಿಯುತ್ತಲೇ—ಇದು ನಟನೆಯಷ್ಟೆ. ಯಾವ ಬೆರಳನ್ನು ಹಿಡಿದರೂ ಸಾಯುವ ಸರದಿ ತನ್ನದೇ ಎಂದು ತರಲನಿಗೆನಿಸಿತು. ಅವನು ಗೋವರ್ಧನನನ್ನೇ ಬಿರಿಬಿರಿ ನೋಡ ತೊಡಗಿದ.

"ಹುಂ, ಹಿಡಿಯಿರಿ ಬೆರಳು!" ಪುನಃ ಅದೇ ದೃಢಸ್ವರ.

ಚೀರಾಡಿ ಬೀದಿಯ ಜನರನ್ನು ನೆರೆಯಿಸಬೇಕೆಂದು ತರಲನಿಗೆ ಇಚ್ಛೆ-ಯಾಯಿತು. ಮೃತ್ಯುಭಯದಿಂದ ಗಂಟಲು ಬಿಗಿದಿತ್ತು. ಸ್ವರವೇ ಹೊರಡ ಲಿಲ್ಲ. ಹೈಮವತಿಯ ಆಶ್ರಯವನ್ನು ಬಯಸಿ ಅವನ ಜೀವ ಚಟಪಟ ಒದ್ದಾಡುತ್ತಲಿತ್ತು. ನಿಷ್ಠುರಳಾದ ಹೈಮವತಿಯೆಲ್ಲಿ? ಒದಗಿ ಬಂದ ಸಾವನ್ನು ಮುಂದೂಡುವುದಕ್ಕಾಗಿ ಅವನೆಂದ: "ನನ್ನ ಮಾತನ್ನಷ್ಟು ಕೇಳಿರಿ...."

ಗೋವರ್ಧನನು ತಲೆ ಕೊಡಹಿ ನುಡಿದ: "ಊಂಹೂಂ, ಹಿಡಿಯಿರಿ ನೀವು!"

ದೃಢವಾದ ಆದೇಶದಿಂದ ತರಲನು ಹತಬುದ್ಧಿಯಾದ. ಇನ್ನು ಬೇರೆ ಗತಿಯಿಲ್ಲವೆಂದು ಅವನು ಗೋವರ್ಧನನ ನಡುಬೆರಳನ್ನು ಮುಟ್ಟಿದ. ಕೂಡಲೆ ಗೋವರ್ಧನನ ಮುಖವು ಉಜ್ವಲವಾಯಿತು. ಅವನಿನ್ನು ಯಾರ ಸಾವಿನ ತೀರ್ಮಾನವನ್ನು ಹೇಳುವನೆಂಬುದರಲ್ಲಿ ತರಲನಿಗೆ ಸಂದೇಹವುಳಿಯಲಿಲ್ಲ. ಉತ್ಸುಕತೆಯಿಂದ ಗೋವರ್ಧನನ ಮೋರೆಯ ಕಡೆ ಕಣ್ಣೆತ್ತಿ ನೋಡಿದ. ನಗು ನಗುತ್ತ ಅವನು ಹೇಳಿದ: "ನಾನೇ ಸಾಯಬೇಕು! ಆದರೆ ತರಲಬಾಬೂ, ನನಗೊಂದು ತಿಂಗಳ ಅವಕಾಶವನ್ನು ಕೊಡಬೇಕು. ನಾನೊಬ್ಬರಿಗೆ ಒಂದು ಚಿತ್ರವನ್ನು ಬರೆದುಕೊಡುವೆನೆಂದು ಮಾತು ಕೊಟ್ಟಿದ್ದೇನೆ. ಈವೊತ್ತು ೯ನೆಯ ಆಷಾಢ; ೯ನೆಯ ಶ್ರಾವಣದ ದಿನ ನಾನು ನಿಮ್ಮ ಹಾದಿಯನ್ನು ಬಿಟ್ಟು ಹೋಗಿರುತ್ತೇನೆ. ಆಗ ವಿಧವೆಯಾದ ಹೈಮವತಿಯನ್ನು ನೀವು ಸಹಜ ವಾಗಿಯೇ ಪಡೆಯಬಹುದು."

ತರಲನು ಅವಾಕ್ಕಾಗಿ ಗೋವರ್ಧನನ ಮೊಗವನ್ನೇ ದಿಟ್ಟಿಸುತ್ತಲಿದ್ದ. ಇದು ಆಗುವ ಮಾತೆ? ತನ್ನ ಬೆರಲನ್ನು ಹಿಡಿಸಿಕೊಂಡು, ತನ್ನ ಸಾವನ್ನೇ ತಾನು ಸಾರುವುದು ಮನುಷ್ಯನಿಗೆ ಸಾಧ್ಯವೆ? ಎಂತಹ ಅಗಾಧಮೂರ್ತಿ ಗೋವ

ರ್ಧನ! ವಿಸ್ಮಯದಿಂದ, ಗೌರವದಿಂದ, ಭೀತಿಯಿಂದ ಸ್ತಂಭಿತನಾಗಿ ತರಲನೆಂದ: "ನನಗಾಗಿ ನೀವು ಸಾಯುವುದೇಕೆ? ನಾನು ಬರುವುದನ್ನೇ ಬಿಟ್ಟುಬಿಡುತ್ತೇನಲ್ಲ...."

ಗೋವರ್ಧನನು ಉಪೇಕ್ಷೆಯಿಂದ ನಕ್ಕು "ನಾನು ನಿಮ್ಮ ಅನುಗ್ರಹದ ಪ್ರಾಣದಾನವನ್ನು ಸ್ವೀಕರಿಸುವುದಿಲ್ಲ. ಇನ್ನು ಮಾತನಾಡಬೇಕಾದುದು ಏನೂ ಇಲ್ಲ, ನೀವು ಹೊರಡಬಹುದು," ಎಂದು ನುಡಿದ.

ಎದ್ದು ಬಂದು ಕೋಣೆಯ ಬಾಗಿಲನ್ನು ತೆರೆದು ಗೋವರ್ಧನನು "ಬರ್ರಿನ್ನು" ಎಂದ.

ಹಠಾತ್ ತರಲನಿಗೆನಿಸಿತು—ಇದೆಲ್ಲವೂ ಗೋವರ್ಧನನ ಹುಸಿಗುಂಡಿನ ಅಬ್ಬರ; ತನ್ನನ್ನು ಬೆದರಿಸುವುದಕ್ಕಾಗಿ ಹೂಡಿದ ಆಟ. ಮನುಷ್ಯನೆಂದಾದರೂ ಇಷ್ಟು ಸಹಜವಾಗಿ ಸಾಯಬಲ್ಲನೆ? ತಾನು ಮೋಸ ಹೋಗುತ್ತಿದ್ದೇನೆಂದು ಎಣಿಸುತ್ತ, ಲಜ್ಜೆಯಿಂದ ಕೋಪದಿಂದ ಅವನು ಭರಭರನೆ ಕೋಣೆಯಿಂದ ಹೊರಬಿದ್ದ.

ತರಲನ ತೋಳುಗಳಲ್ಲಿ ತಾನು ಕಟ್ಟುವಡೆದಾಗ ಗೋವರ್ಧನನು ಬಂದು ಹಿಂದಕ್ಕೆ ಹೋದುದನ್ನು ಹೈಮವತಿ ಕಂಡಿದ್ದಳು. ಅವನು ತರಲನನ್ನು ಕೋಣೆಯೊಳಗೆ ಕರೆದುಕೊಂಡು ಹೋಗಿ ಬಾಗಿಲಿಕ್ಕಿಕೊಳ್ಳುತ್ತಲೇ ಅವಳು ಬೆದರಿದಳು. ಕೆಳಗೆ ಬಂದು ಕೋಣೆಯ ಬಾಗಿಲ ಹತ್ತಿರ ಆ ಕಡೆಗೇ ಕಿವಿಗೊಟ್ಟು ನಿಂತಿದ್ದಳು. ಅವರ ಮಾತುಗಳೆಲ್ಲ ಆಕೆಗೆ ಕೇಳಿದ್ದವು. ಇಬ್ಬರೂ ಹೊರಗೆ ಬರುವಷ್ಟರಲ್ಲಿ ಅವಳು ಪುನಃ ಉಪ್ಪರಿಗೆಯ ಮೇಲೆ ಹೋಗಿಬಿಟ್ಟಿದ್ದಳು.

ಹೈಮವತಿಯ ಮೈಯೆಲ್ಲ ಝುಮ್‌ಝುಮ್ ಎನ್ನುತ್ತಲಿತ್ತು, ಅವಳ ಚೇತನೆ ಲುಪ್ತಪ್ರಾಯವಾಗಿದ್ದಿತು, ಕಾಲಕೆಳಗಿನ ನೆಲವು ಸರಿದು ಹೋಗುತ್ತಲಿದ್ದಿತು. ಗೋವರ್ಧನನ ಸ್ವಭಾವವು ಅವಳಿಗೆ ಚೆನ್ನಾಗಿಯೇ ಗೊತ್ತಿತ್ತು. ಅವನು ಮಾತನಾಡುವುದು ಕಡಿಮೆ, ಆಡಿದಂತೆ ಮಾಡಲು ತಪ್ಪುವವನಲ್ಲ. ಅವನ ಮನೋಬಲ ಅಸಾಧಾರಣ, ಅವನ ಸತ್ಯನಿಷ್ಠೆ ಅಸಾಮಾನ್ಯ! ಗೋವರ್ಧನನ ಮರಣವು ಸನ್ನಿಹಿತವಾಗಿದೆಯೆಂಬುದನ್ನು ನೆನೆಯುತ್ತಲೆ ಹೈಮವತಿಯ ನೆತ್ತರು ಮಂಜುಗಟ್ಟಿತು, ರಕ್ತಪ್ರವಾಹ ನಿಂತುಹೋಯಿತು ವೇದನೆ

ಯಿಂದ ಅವಳ ಜೀವ ಒದ್ದಾಡತೊಡಗಿತು. ಗೋವರ್ಧನನನ್ನು ತಾನೆಷ್ಟು ಪ್ರೀತಿಸುತ್ತಿದ್ದೇನೆ, ಅವನು ತನ್ನ ಹೃದಯವನ್ನು ಕೊಂಚಕೊಂಚವಾಗಿ ಎಷ್ಟು ವ್ಯಾಪಿಸಿಕೊಂಡಿದ್ದಾನೆ ಎಂಬುದನ್ನು ಅವಳೀಗ ಅರಿತುಕೊಂಡಳು. ಇಷ್ಟೊಂದು ಮಹತ್ತ್ವವಾದ ಪ್ರಿಯತಮವಾದ ಪ್ರಾಣವನ್ನು ಅವನು ತುಚ್ಛ ಳಾದ ಮೂಲ್ಯರಹಿತಳಾದ ತನಗಾಗಿ ನೀಗುತ್ತಾನೆಂಬ ವೇದನೆಯ ಧಿಕ್ಕಾರವು ಹೈಮವತಿಯ ಹೃದಯದೊಳಗೆ ಧ್ವನಿಗೈಯತೊಡಗಿತು.

ವಿಚಾರಗಳ ಆಂದೋಲನದಲ್ಲಿ ಆಕಾಶಪಾತಾಲಗಳಿಗೆ ಉಯ್ಯಾಲೆ ಯಾಡುತ್ತ ಹೈಮವತಿ ಸ್ತಬ್ಧವಾಗಿ ನಿಂತಿದ್ದಳು. ಗೋವರ್ಧನನು ಬಂದು ನಗುತ್ತ ಅವಳಿಗೆಂದ: " ಈದಿನ ಸಾಲೆಗೆ ಸಾಹೇಬರು ಬಂದಿದ್ದರು; ಅದಕ್ಕೇ ಸಾಲೆ ಬೇಗ ಬಿಟ್ಟಿತು."

ಹೈಮವತಿ ಸುಮ್ಮನಿದ್ದಳು. ಗೋವರ್ಧನನ ದನಿಯನ್ನು ಕೇಳಿ ಮಲ ಗಿದ್ದ ಮಗು ನಿದ್ದೆ ತಿಳಿದೆದ್ದಿತು. "ಅಪ್ಪಾ" ಎಂದು ಅವನಿಗೆ ಸಾಗರಬಿದ್ದಿತು.

" ಅಕ್ಕ ಎಲ್ಲಿದ್ದಾಳೆ?" ಮಗುವನ್ನೆತ್ತಿಕೊಂಡು ಅವನು ಕೇಳಿದ.

" ಅಕ್ಕ ಮಲಗಿದ್ದಾಳೆ."

ಗೋವರ್ಧನನು ಮಗುವನ್ನು ತನ್ನ ಕೋಣೆಗೆ ಕರೆದೊಯ್ದು ಕೆಳಗಿಳಿಸಿ, " ಹೋಗು, ಆಡು ಹೋಗು" ಎಂದ.

ಅನ್ನಪೂರ್ಣೆ ಹೈಮವತಿಯರ ಎದುರಿನಲ್ಲಿ ಗೋವರ್ಧನನು ಮಗುವನ್ನು ಪ್ರೀತಿಸುತ್ತಿದ್ದ; ಅವರಿಲ್ಲದಲ್ಲಿ ಅದನ್ನು ಕಂಡರಾಗುತ್ತಿರಲಿಲ್ಲ. ಮಗುವಿಗೂ ಅದರ ಅನುಭವವಾಗಿತ್ತು. ಅಪ್ಪನೆಂದರೆ ಅದಕ್ಕೆ ಎಷ್ಟು ಪ್ರೀತಿಯೋ ಅಷ್ಟೇ ಭಯ. ಅವನ ಅಪ್ಪಣೆಯನ್ನು ಅಲ್ಲಗಳೆಯಲಾರದೆ ಮಗು ಮೆಲ್ಲಮೆಲ್ಲನೆ ಹೊರಗೆ ಬಂದಿತು. ಹೈಮವತಿ ಆಗಲೂ ಸ್ತಬ್ಧವಾಗಿ ನಿಂತಿದ್ದಳು.

ಗೋವರ್ಧನನು ತನ್ನ ಮೇಲೆ ಸಿಟ್ಟಿಗೇಳಲಿ, ತಿರಸ್ಕರಿಸಲಿ ಬಯ್ಯಲಿ, ಚಿಕಿತ್ಸೆಮಾಡಲಿ; ಆದರೆ ಈ ರೀತಿ ನಗೆಯ ಮುಸುಕಿನೊಳಗೆ ಅಪನಂಬಿಗೆ ಯನ್ನು ಅಡಗಿಸಿ ತನ್ನ ಅಪರಾಧಕ್ಕೆ ಅತಿಯಾಗಿ ಶಿಕ್ಷೆಯನ್ನು ವಿಧಿಸುತ್ತಿರು- ವುದೇಕೆ? ಎಂದು ಹೈಮವತಿಗೆ ಎನಿಸಿತು. ಆಗವಳು ಈ ವಿಷಯವಾಗಿ ತಾನೇ ಕೇಳಿಬಿಡಬೇಕೆಂದು ಯೋಚಿಸಿಕೊಂಡು ಅವನ ಕೋಣೆಗೆ ಹೋಗಿ ಬಾಗಿಲಲ್ಲಿ ನಿಲ್ಲುತ್ತಲೇ ಅವನು ನಗುಮೊಗದಿಂದ ಸ್ವಾಗತವಿತ್ತ.

" ಬಾ ಆನಂದಮಯಿ, ಇಂದಿನದು ಉತ್ಕೃಷ್ಟ ಮಳೆ— ನಾವು ಹಳ್ಳಿ ಜನ. ಹಲಸಿನ ಬೀಜದ ಪಲ್ಯ ಮತ್ತು ಅನ್ನ ಉಣ್ಣಬೇಕೆಂಬ ಬಯಕೆಯಾಗಿದೆ. ಮಾಡಿ ಹಾಕಬಲ್ಲೆಯಾ ಅನೂನ ತಾಯಿ?"

ಹೆಂಡತಿಯ ಅನಾಚಾರದ ಮೂಲಕ ಸಾಯಲು ಸಂಕಲ್ಪಿಸಿದವನ ಬಾಯಲ್ಲಿ ಇಂತಹ ಸಣ್ಣ ವಿಷಯದ ಪ್ರಸ್ತಾಪ. ಹೈಮವತಿಗೆ ಆಶ್ಚರ್ಯವಾಯಿತು. ಅವಳು ಮೆಲ್ಲಮೆಲ್ಲನೆ ಹಿಂದಿರುಗಿದಳು. ಯಾವ ಮಾತನ್ನೆತ್ತುವುದಕ್ಕೂ ಸಾಧ್ಯವಾಗಲಿಲ್ಲ.

## ೨೦

ಅಂತರಂಗವಲ್ಲಿಯ ಈ ಲಜ್ಜಾಜನಕವಾದ ಭಯಂಕರವಾದ ವಿಷಯವನ್ನು ಗೋವರ್ಧನನೆದುರು ತೆಗೆಯುವ ಸಂಕಲ್ಪದಿಂದ ಹೈಮವತಿ ಹೋದಷ್ಟು ಸಲವೂ ಅವನು ಏನಾದರೂ ಸಣ್ಣ ಕಿರುಕುಳ ಮಾತುಗಳನ್ನಾಡುತ್ತಿದ್ದ. ಗಂಭೀರಸಮಸ್ಯೆಯನ್ನು ಕುರಿತು ವಿಚಾರ ಮಾಡುವುದಕ್ಕೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ಆದರೂ ಅವನು ಕೊನೆಯ ಯಾತ್ರೆಯ ಏರ್ಪಾಟನ್ನು ನಡೆಯಿಸಿದ್ದುದು ದಿನಾಲು ಅವಳ ಲಕ್ಷ್ಯಕ್ಕೆ ಬರದಿರುತ್ತಿರಲಿಲ್ಲ. ಅವನೊಂದು ದಿನ ಉಳಿದಿದ್ದ ತನ್ನ ಅಲ್ಪ ಸಂಪತ್ತಿಯನ್ನೆಲ್ಲ ಮಾರಿ, ಬಂದ ಹಣವನ್ನು ಹೈಮವತಿಯ ಕೈಯಲ್ಲಿ ಕೊಟ್ಟು, ನಗುನಗುತ್ತ ಹೇಳಿದ: " ಅನುವಿನ ಮದುವೆಗಾಗಿ ಕೊಂಚ ಕೊಂಚ ಕೂಡಿಡು. ನಾನೊಂದು ವೇಳೆ ಆಕಸ್ಮಾತ್ ಪಟ್ಟನೆ ಬಿದ್ದುಹೋದರೆ, ಅನು ನಿನ್ನವಳೇ. ನೀನೇ...."

ಗೋವರ್ಧನನ ಬಿಗಿದ ಕೊರಳಿನ ದನಿಯೂ ನೀರು ತುಂಬಿದ ಕಣ್ಣುಗಳೂ ಅವನ ನಗೆಯ ಹುಸಿತನವನ್ನು ಒಡೆದುಕೊಟ್ಟವು. ಅವನ ಈ ಕಾತರತೆ ಹೈಮವತಿಗೆ ಸಾಹಸವನ್ನು ತಂದುಕೊಟ್ಟಿತು. ಅವಳು ಗೋವರ್ಧನನ ಕಾಲ ಮೇಲೆ ಬಿದ್ದು ಕಾತರಸ್ವರದಿಂದ ನುಡಿದಳು: " ನೀವು ನನ್ನನ್ನು ಶಿಕ್ಷಿಸಿರಿ, ನಿರಪರಾಧಿಗಳಾದ ಮಕ್ಕಳಿಬ್ಬರನ್ನೇಕೆ ಶಿಕ್ಷಿಸುವಿರಿ? ನನ್ನನ್ನು ನಂಬಿರಿ. ನಾನು ನಿಮ್ಮ ಸಂಬಂಧದ ಸತೀತ್ವಮರ್ಯಾದೆಗೆ ಕಲಂಕ ಹಚ್ಚಿಲ್ಲ, ನಿಮ್ಮ ಮಹತ್ತತೆಗೂ ಕಪ್ಪು ಬಳಿದಿಲ್ಲ. ನನ್ನನ್ನು ಉಳಿಸಿದ ಕೈಯಿಂದಲೇ ಕೊಲ್ಲಲಾಗದು, ಮಕ್ಕಳನ್ನು ಕೈಯಾರೆ ಕೊಲೆಮಾಡಬಾರದು."

ಈ ಪದಿನೈದಿಪ್ಪತ್ತು ದಿನ ಗೋವರ್ಧನನು ಹೈಮವತಿಯೊಂದಿಗೆ ನಗು-ಮೊಗದಿಂದಲೇ ಮಾತನಾಡುತ್ತಿದ್ದ. ಹಿಂದಿನಂತೆ ಅವಳ ದರ್ಶನಕ್ಕಾಗಿ ಇಲ್ಲವೆ ಸ್ಪರ್ಶಕ್ಕಾಗಿ ಅವನ ಮನಸು ಲಂಪಟವಾಗಿರಲಿಲ್ಲ. ಇಂದು ಮಾತ್ರ ಅವಳ ತೋಳುಗಳನ್ನು ಹಿಡಿದೆತ್ತಿ ನಿಲ್ಲಿಸಿ ಅತಿ ಸ್ನೇಹದಿಂದ ನಗುತ್ತ ವಿನೋದ ವಾಡಿದ: "ನಿನಗೆಲ್ಲವೂ ಗೊತ್ತಾಗಿರುವಂತೆ ಕಾಣುತ್ತದೆ? ಒಳ್ಳೆಯದೇ ಆಯಿತು. ಮಿಥ್ಯಾಸಂದೇಹದ ಹೊರೆಯನ್ನಿಳಿಸಿ, ಸುಖವಾಗಿ ಯಾತ್ರೆ ಬೆಳೆಸುವೆ."

ಹೈಮವತಿ ಕಾತರಳಾಗಿ ಗೋವರ್ಧನನ ಕೈಯನ್ನು ಹಿಡಿದು ಪ್ರಶ್ನಿಸಿ ದಳು: "ನನ್ನಲ್ಲಿ ನಂಬುಗೆಯಿದ್ದುದಾದರೆ ನನ್ನನ್ನೇಕೆ ತ್ಯಜಿಸುತ್ತೀರಿ?"

ಗೋವರ್ಧನನು ನಗುತ್ತ ಉತ್ತರವಿತ್ತ: "ಇಲ್ಲ. ನಾನು ಈ ಮೊದಲೇ ಮಾತು ಕೊಟ್ಟಿದ್ದೇನೆ. ಇನ್ನು ಹಿಂದುಳಿದರೆ ಜನ ನಗುವರು; ಈ ಹುಂಬ ಕಾಡು ಮನುಷ್ಯ ಬರೀ ವಚನವಾಗೀಶ ಎನ್ನುವರು. ನಾನು ದುಷ್ಟಗ್ರಹ ದಂತೆ ನಿಮ್ಮಿಬ್ಬರ ನಡುವೆ ಬಿದ್ದಿದ್ದೆ. ಸನ್ನಷ್ಟಕ್ಕೆ ನನ್ನನ್ನು ಹೋಗಗೊಡು."

"ನಾನು ನಿಮ್ಮನ್ನು ಪ್ರೀತಿಸುತ್ತೇನೆ!...." ವ್ಯಾಕುಲತೆಯಿಂದ ಅವನ ಮುಖದ ಕಡೆ ನೋಡಿ ಹೈಮವತಿಯೆಂದಳು.

ಅತ್ಯಂತ ತೃಪ್ತಿಯಿಂದ ಅವಳ ಹಣೆಯನ್ನು ಚುಂಬಿಸಿ ಗೋವರ್ಧನ ನೆಂದ: "ಅದು ನನಗೆ ಗೊತ್ತು. ಇಂದು ಅದನ್ನು ನಿನ್ನ ಬಾಯಿಯಿಂದ ಕೇಳಿ ದುದೇ ನನ್ನ ಜೀವನದಲ್ಲಿ ಪರಮಪುರಸ್ಕಾರ, ಚರಮಲಾಭ. ನನ್ನ ಬಾಳು ಸಾರ್ಥಕವಾಯಿತು. ನೀನು ನನ್ನನ್ನು ಪ್ರೀತಿಸುತ್ತಿದ್ದರೆ, ನನ್ನ ಮೋರೆಗೆ ಅಸತ್ಯವಾದಿಯೆಂಬ ಅಪಕೀರ್ತಿಯ ಕಪ್ಪನ್ನು ಬಳಿದು, ನಿನ್ನ ಹತ್ತಿರ ಹಿಡಿ-ದಿಟ್ಟುಕೊಳ್ಳಬೇಡ."

ಇದಕ್ಕೆ ಏನುತ್ತರಕೊಡಬೇಕೆಂಬುದು ಹೈಮವತಿಗೆ ಹೊಳೆಯಲಿಲ್ಲ. ಅವಳು ತನ್ನ ಪ್ರೀತಿಗೆ ತಾನೇ ಸೋತಳು. ಗೋವರ್ಧನನ ಗೌರವದೆದುರಿನಲ್ಲಿ ಅವಳ ಸುಖದ ಆಶೆ, ದುಃಖದ ಭಯ ಎಲ್ಲವೂ ತುಚ್ಛವಾಗಿ ತೊಲಗಿ ಹೋದವು. ಅವನ ಎದೆಯ ಮೇಲೆ ಮುಖವನ್ನಿರಿಸಿ ಬಿಕ್ಕಿಬಿಕ್ಕಿ ಅಳತೊಡಗಿ ದಳು. ಅವನು ಅವಳ ತಲೆಯ ಮೇಲೆ ಮೆಲ್ಲಮೆಲ್ಲನೆ ಕೈಯಾಡಿಸುತ್ತ ಪರಮ ಸ್ನೇಹದಿಂದ ಸಂತಯಿಸುತ್ತಲಿದ್ದ.

ಮರಣಸಂಕಲ್ಪದಿಂದ ಗೋವರ್ಧನನ ಮನಸನ್ನು ತಿರುಗಿಸಲೆಂದು ಹೋಗಿ ಹೈಮವತಿ ತಾನೇ ಸೋತುಬಿಟ್ಟಬಳಿಕ, ಮೂವತ್ತುಮೂರು ಕೋಟಿ ದೇವತೆಗಳಿಗೆ ಮೊರೆಹೊಕ್ಕಳು: ಯಾವ ಕೌಶಲದಿಂದಾದರೂ ಅವರು ಗೋವರ್ಧನನ ಸಂಕಲ್ಪವನ್ನು ಬಿಡಿಸಲಿ, ಅವನು ತಾನಾಗಿಯೇ ಅದರಿಂದ ಪರಾಙ್ಮುಖನಾಗುವಂತೆ ಏನಾದರೂ ಕಾರಣವುಂಟಾಗಲಿ; ಅವನು ಬರೆಯುತ್ತಲಿದ್ದ ಚಿತ್ರವು ಮುಗಿಯದೆ ಹೋಗಲಿ, ಅವನು ಯಾರ ಮನೆಯೊಳಗೆ ಚಿತ್ರ ಬರೆಯುತ್ತಿರುವನೋ ಆ ಮನೆಯ ಹುಡುಗರು ಅದನ್ನು ಕೆಡಿಸಿಬಿಡಲಿ, ಆ ಚಿತ್ರವು ಗಿರಾಕಿಯ ಮನಸಿಗೆ ಬಾರದೆ ಪುನಃ ತೆಗೆಯುವಂತಾಗಲಿ— ಇತ್ಯಾದಿ. ಗೋವರ್ಧನನು ಚಿತ್ರತೆಗೆಯುತ್ತಿದ್ದ ಮನೆಗೆ ಹೈಮವತಿಗೆ ಹೋಗುವುದು ಸಾಧ್ಯವಿದ್ದಿದ್ದರೆ ಅವಳೇ ಹೋಗಿ ಅದನ್ನು ಕೆಡಿಸಿ ಬರುತ್ತಿದ್ದಳು.

ಈ ತೆರದ ಚಿಂತೆಗಳಲ್ಲಿಯೆ ಮತ್ತೆ ಕೆಲವು ದಿನಗಳು ಕಳೆದವು. ಹೈಮವತಿ ನೆನೆದ ಕಾರಣಗಳಲ್ಲಿ ಯಾವುದೂ ಘಟಿಸಲಿಲ್ಲ. ತಿಂಗಳು ತುಂಬಲಿಕ್ಕೆ ಇನ್ನೆರಡು ದಿನಗಳು ಮಾತ್ರ ಉಳಿದಿವೆ. ಗೋವರ್ಧನನ ನಗೆಗೂ ಮಾತುಕತೆಗಳಿಗೂ ತುದಿಮೊದಲಿರಲಿಲ್ಲ ಹೈಮವತಿ ಮಾತ್ರ ಸ್ತಬ್ಧಳಾಗುತ್ತ, ಕೃಶಳಾಗುತ್ತ, ವಿವರ್ಣಳಾಗುತ್ತ ಬಂದಿದ್ದಳು. ಅವಳ ದುಃಖ ಉದ್ವೇಗಗಳನ್ನು ಕಂಡು ಗೋವರ್ಧನನ ಮನಸು ಆನಂದದಲ್ಲಿ ಈಸಾಡುತ್ತಿತ್ತು, ಸಾಹಸದಲ್ಲಿ ದೃಢವಾಗುತ್ತಲಿತ್ತು.

ಕೊನೆಯ ದಿನ ಬಂದಿತು. ಅದನ್ನು ನೆನೆದೊಡನೆ ಹೈಮವತಿಯ ಮೈ ಜುಮ್ಮೆಂದಿತು. ಇಳಿಹೊತ್ತಿನಲ್ಲಿ ಗೋವರ್ಧನನು ಬಂದು ನೋಟುಗಳ ಕಟ್ಟೊಂದನ್ನು ಅವಳ ಕೈಗಿತ್ತು ನಗುತ್ತ ಹೇಳಿದ: "ಆ ಚಿತ್ರವನ್ನು ಮುಗಿಸಿ ಕೊಟ್ಟೆನಲ್ಲ, ಅದರ ಬೆಲೆ ಇದು."

ಸುಣ್ಣವನ್ನು ಬಳಿದಂತೆ ಬೆಳ್ಳಗಾಯಿತು ಹೈಮವತಿಯ ಮುಖ.— ಪೋಲಿಸರಿಗೆ ತಿಳಿಸಬೇಕೆ? ಹಾಗೆ ಮಾಡಿದರೆ ಗೋವರ್ಧನನಿಗೆ ಅವಮಾನವಾಗುವುದಲ್ಲ!

ಗೋವರ್ಧನನು ಎಂದಿನಂತೆಯೆ ನಗುತ್ತ ಕೆಲೆಯುತ್ತ, ಮಾತುಕತೆಯಾಡುತ್ತ ರಾತ್ರಿಯ ಊಟವನ್ನು ತೀರಿಸಿ, ತನ್ನ ಕೋಣೆಗೆ ಮಲಗಲು

ಹೋದ. ಹೈಮವತಿಗೆ ಒಂದು ತುತ್ತೂ ಊಟ ಹೋಗಲಿಲ್ಲ. ಅವಳು ಮೆಲ್ಲಗೆ ಹೋಗಿ ಅವನ ಕೋಣೆಯನ್ನು ಪ್ರವೇಶಿಸಿದಳು.

" ಏನು ಕಾವಲುಗಾರ್ತಿ! ಅಂಜಬೇಡ. ಮನೆಯೊಳಗೆ ಸತ್ತು ನಿಮ್ಮ ಮೇಲೆ ಸಂಕಟವನ್ನು ತರುವುದಿಲ್ಲ " ನಗುತ್ತ ಗೋವರ್ಧನನು ಮಾತನಾಡಿದ.

ಅವಳು ಒಣನೋರೆ ಮಾಡಿಕೊಂಡು ಅವನ ಕಾಲದಿಸೆಯಲ್ಲಿ ಕುಳಿತುಕೊಂಡಳು. ಹೈಮವತಿ ಹೀಗೆ ಕುಳಿತುದು ಮದುವೆಯಾದಂದಿನಿಂದ ಈವರೆಗೆ ಇದೇ ಮೊದಲು. ಗೋವರ್ಧನನು ಚಟಕ್ಕನೆ ಎದ್ದು ಕುಳಿತ. ಯಾವ ಅಲಭ್ಯಲಾಭಕ್ಕಾಗಿ ಅವನ ಮನಸು ಇಷ್ಟು ದಿನ ತಳಮಳಿಸುತ್ತಿದ್ದಿತೋ ಅದೀಗ ತಾನಾಗಿ ಲಭ್ಯವಾಗಿತ್ತು. ಆದರೆ ಅವನಿಂದು ವಿಚಲಿತನಾಗಲಿಲ್ಲ. ನಕ್ಕು " ಮಲಗಿಕೋ ಹೋಗು, ರಾತ್ರಿಯಾಗಿದೆ!" ಎಂದ.

" ನೀವು ಮಲಗಿಕೊಳ್ಳಿರಿ ಆಮೇಲೆ ನಾನು ಹೋಗುತ್ತೇನೆ "

ಅವಳ ಸ್ವರದಲ್ಲಿ ಅಳು ಸೂಸುತ್ತಿತ್ತು. ಆಶಾತೀತವಾದ ಈ ಮರಣ ಪಾಥೇಯವನ್ನು ಪಡೆದು ಗೋವರ್ಧನನಿಗೆ ಹರ್ಷವಾಯಿತು. "ಆಗಲಿ, ನಾನು ಮಲಗುತ್ತೇನೆ. ನನ್ನ ನಿದ್ದೆಯೇನು ಬಲು ಸಹಜವಾದ ಮಾತು; ಈಗ ಹತ್ತುತ್ತದೆ. ನಿನ್ನನ್ನು ಹೆಚ್ಚು ಹೊತ್ತು ಕುಳ್ಳಿರಿಸಿ ನಿದ್ದೆಗೆಡಿಸುವುದಿಲ್ಲ" ಎಂದ.

ಗೋವರ್ಧನನು ಮಗ್ಗುಲಾಗಿ ಮಲಗಿ ಕಣ್ಣು ಮುಚ್ಚಿದ. ಮೃತ್ಯು ತಲೆದಿಂಬುದಿಸೆಯಲ್ಲಿಯೆ ಹೊಂದಿಕೊಂಡು ನಿಂತಿರುವಾಗ ಇಷ್ಟೊಂದು ಸಹಜ ವ್ಯವಹಾರ ಇವನ ಮನೋಬಲವಾದರೂ ಎಂತಹದು! ಹೈಮವತಿಯ ಭಕ್ತಿ ಚೆಲ್ಲವರಿಯಿತು. ಅವಳ ಪ್ರೇಮವು ಆವೇಗದಿಂದ ಅವನ ಕಡೆಗೆ ಧಾವಿಸಿತು. ಅವಳು ಅವನ ಕಾಲುಗಳನ್ನು ಒತ್ತಲು ಕೈಹಾಕಿದಳು.

ಕಾಲುಗಳನ್ನು ಸರಕ್ಕನೆ ಎಳೆದುಕೊಂಡು ಗೋವರ್ಧನನು ಎದ್ದು ಕುಳಿತ. ಹೈಮವತಿಯ ಕೈಯನ್ನು ಹಿಡಿದು ಅವನೆಂದ: " ಇದೇನು ಮಾಡುತ್ತೀ ದೇವಿ? ಹೀಗೆ ಮಾಡಿದರೆ ನಿದ್ದೆ ಹೇಗೆ ಬರಬೇಕು? "

ಅಳುವಿನಲ್ಲಿ ಮುಳುಗೆದ್ದು ಬಂದ ಕಾತರಸ್ವರದಲ್ಲಿ ಹೈಮವತಿ ಹೇಳಿ

ದಳು: "ಈಪೊತ್ತು ನನ್ನನ್ನು ತಡೆಯಬೇಡಿರಿ. ನೀವು ಮಲಗಿಕೊಳ್ಳಿರಿ; ನಾನು ಕಾಲೊತ್ತುತ್ತೇನೆ."

ಗೋವರ್ಧನನು ಪುನಃ ನಕ್ಕು ಅವಳ ಕೈಮೇಲೆ ಕೈಯಾಡಿಸಿ ಮಲಗಿಕೊಂಡ. ಅವನ ಕಾಲೊತ್ತುತ್ತ ಉಕ್ಕಿಬರುವ ಅಳುವನ್ನು ಗಂಟಲೊಳಗೇ ತಡೆಹಿಡಿದು ಹೈಮವತಿಯೆಂದಳು: "ನಿಮ್ಮ ಪಾದಗಳನ್ನು ಮುಟ್ಟಿ ಹೇಳುತ್ತೇನೆ—ನಾನು ಸತೀತ್ವದ ಮರ್ಯಾದೆಯನ್ನು ಕಲಂಕಿತಗೊಳಿಸಿಲ್ಲ; ನಿಮ್ಮ ಗೌರವಕ್ಕೆ ಕುಂದು ತಂದಿಲ್ಲ"

ಅವಳನ್ನು ಸಂತಯಿಸುವ ಸ್ವರದಲ್ಲಿ ಗೋವರ್ಧನನೆಂದ: "ಮತ್ತೆ ಆ ಮಾತೇಕೆ? ನೀನು ನನ್ನನ್ನು ಪ್ರೀತಿಸುತ್ತೀ ಎಂಬುದನ್ನು ನಾನು ಬಲ್ಲೆ. ನಿನ್ನ ಮೇಲಿನ ನನ್ನ ಪ್ರೀತಿಯೂ ಕಡಿಮೆಯಾಗಿಲ್ಲ."

ಹೈಮವತಿ ಕಂಬನಿಗಳನ್ನು ಮಿಡಿದಳು, ಮಾತನಾಡಲಿಲ್ಲ. ಕೆಲಹೊತ್ತಿನಲ್ಲಿ ಗೋವರ್ಧನನಿಗೆ ನಿದ್ದೆ ಹತ್ತಿತು ಬಳಿಕ ಹೈಮವತಿ ಮೆಲ್ಲನೆದ್ದು ಅವನ ಅಡಿಗಳ ಮೇಲೆ ಹಣೆಯಿಟ್ಟು ವಂದಿಸಿ, ಅವನ ನಿದ್ರಾಲೋಲವಾದ ಹಾಸ್ಯವದನವನ್ನು ನೋಡಿ ನೋಡಿ ಕಣ್ಣೊರಿಸಿಕೊಳ್ಳುತ್ತಾ ಹೊರಟುಹೋದಳು. ತನ್ನ ಕೋಣೆಗೆ ಹೋಗಿ ತರಲನ ಭಾವಚಿತ್ರದೆದುರು ನಿಂತು ಅತ್ತು ಅತ್ತುಮೊಂಡೆಯೂರಿ ನಮಸ್ಕರಿಸಿದಳು. ಬಳಿಕ ಮಕ್ಕಳಿಬ್ಬರ ಮುಖಗಳ ಮೇಲೆ ಮುತ್ತುಗಳ ಮಳೆಗರೆದು ದೀಪ ಆರಿಸಿದಳು.

ಬೆಳಗಾದ ಮೇಲೆ ಗೋವರ್ಧನನು ಹೈಮವತಿಯ ಕೋಣೆಯ ಎದುರಿನಲ್ಲಿ ಹಾಯ್ದುಹೋಗುವಾಗ ಮಗುವಿನ ದನಿ ಕೇಳಿಸಿತು.

"ಅವ್ವಾ, ಏ ಅವ್ವಾ, ನೀನಿನ್ನೂ ಎಷ್ಟು ಹೊತ್ತು ತೊಟ್ಟಿಲ ಆಡುತ್ತೀಯವ್ವಾ? ಮೈತೊಳೆದುಕೋ ಹೋಗು. ನಾನು ತೊಟ್ಟಿಲ ಆಡುತ್ತೇನೆ."

ಹೈಮವತಿ ಮುಂಜಾನೆದ್ದು ತೊಟ್ಟಿಲ ಆಡುತ್ತಿದ್ದಾಳೆಂಬುದನ್ನು ಕೇಳಿ, ಗೋವರ್ಧನನು ಕುತೂಹಲದಿಂದ ನೋಡಲು ಅತ್ತ ತಿರುಗಿದ. ಅನ್ನಪೂರ್ಣೆ ಅವ್ವನಿಗೆನ್ನುತ್ತಿದ್ದಳು: "ಅವ್ವಾ, ಏ ಅವ್ವಾ, ಹೀಗೆ ನೋಡಬೇಡವ್ವ, ನಮಗೆ ಅಂಜಿಕೆ ಬರುತ್ತದೆ."

ಗೋವರ್ಧನನು ಕೋಣೆಯ ಬಾಗಿಲನ್ನು ತಳ್ಳಿ ನೋಡಿದ. ಹೈಮವತಿ

ತೊಟ್ಟಿಲನ್ನು ಬಿಚ್ಚಿ ಅದರ ಹಗ್ಗದಿಂದ ಉರುಲು ಹಾಕಿಕೊಂಡು ನೇತಾಡು-ತ್ತಿದ್ದಳು. ಅವಳ ಕಣ್ಣುಗಳು ವಿಸ್ಫಾರಿತವಾಗಿದ್ದವು ಅವನು ಓಡಿಹೋಗಿ ಅವಳನ್ನು ಮೇಲಕ್ಕೆತ್ತಿ ಹಿಡಿದು ಹೇಳಿದ: "ಅನ್ನೂ, ಹೋಗಿ ಚಾಕು ಈಳಿಗೆ ಏನಾದರೂ ತೆಗೆದುಕೊಂಡು ಬಾ."

ಹಿಂದಕ್ಕೆ ಅವಳು ಸಾಯುಹೋದಾಗ ಗೋವರ್ಧನನು ಅವಳ ಜೀವ ಸಹಿತವಾದ ದೇಹವನ್ನು ಎತ್ತಿದ್ದ. ಇಷ್ಟು ದಿನಗಳ ಮೇಲೆ ಇಂದು ಹೈಮವತಿಯ ಮೃತಕಳೇವರವನ್ನು ಎದೆಯ ಮೇಲೆ ತೆಗೆದುಕೊಂಡು ಕೆಳಗಿಳಿಸಿದ ದೇಹದಲ್ಲಿ ಜೀವವಿಲ್ಲವೆಂಬುದು ಮನವರಿಕೆಯಾಗಿ ಅವನು ಅಳತೊಡಗಿದ: "ಇದೇನು ಮಾಡಿದೆ ನೀನು! ನಿನ್ನ ಮಕ್ಕಳ ಜೋಪಾನಕ್ಕೆ ನನ್ನನ್ನು ಇಟ್ಟು ಹೋದೆಯಾ? ನನ್ನನ್ನು ಮಿಥ್ಯಾವಾದಿಯನ್ನಾಗಿ ಮಾಡಿ ಹೀಗೆ ಹೊರಟು-ಹೋಗಬೇಕೆ? "

ಮಗು ಅನ್ನಪೂರ್ಣೆಯರೂ ಬೋರಾಡಿಕೊಂಡು ಅಳತೊಡಗಿದರು. ಅಡಿಗೆಯವಳೂ ದಾಸಿಯೂ ಓಡಿ ಬಂದು ಅಳಲಾರಂಭಿಸಿದರು. ಅವರ ರಂಬಾಟದಿಂದ ಗೋವರ್ಧನನು ಎಚ್ಚರುಗೊಂಡು, ಕಣ್ಣೊರಿಸಿಕೊಂಡು ನುಡಿದ:

"ದಾಸೀ, ತರಲಬಾಬುಗಳನ್ನು ಒಂದಿಷ್ಟು ಕರೆದುಕೊಂಡು ಬಾ."

---